KA / BG-GPO / 2515 / WPP-47 / 2006-2008


# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಆಗಸ್ಟ್ ೩೦, ೨೦೦೭ (ಭದ್ರಾಪದ ೮, ಶಕ ವರ್ಷ ೧೯೨೯) | ಸಂಚಿಕೆ ೩೫ |
|---|---|---|


## ಭಾಗ–೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಎ.ಸಿ.ಕುಮಾರಸ್ವಾಮಿ, ಕಿರಿಯ ಇಂಜಿನೀಯರ್, ಲೋಕೋಪಯೋಗಿ ಇಲಾಖೆ ಇವರನ್ನು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಸೇವೆಯಲ್ಲಿ ಖಾಯಂ ಆಗಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಶ್ರೀ ಎ.ಸಿ.ಕುಮಾರಸ್ವಾಮಿ, ಕಿರಿಯ ಇಂಜಿನೀಯರ್, ಇವರ ಮನವಿ ದಿನಾಂಕ: 28.10.06.
2) ಮುಖ್ಯ ಇಂಜಿನೀಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿಎಸ್ 83 ಎಂಎಸ್‌ಸಿ–ಇಎಸ್ಇ 2006, ದಿನಾಂಕ: 22.12.2006.
3) ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 70 ಎಸ್‌ಆರ್‌ಎಸ್ 77, ದಿನಾಂಕ: 27.10.1977.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ಶ್ರೀ ಎ.ಸಿ.ಕುಮಾರಸ್ವಾಮಿ, ಕಿರಿಯ ಇಂಜಿನೀಯರ್, ಲೋಕೋಪಯೋಗಿ ಇಲಾಖೆ ನಿಯೋಜನೆ ಮೇಲೆ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ಇವರ ಸೇವೆಯನ್ನು ಖಾಯಂ ಆಗಿ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಸೇವೆಯಲ್ಲಿ ವಿಲೀನಗೊಳಿಸಬೇಕೆಂದು ಕೋರಿದ್ದರ ಮೇರೆಗೆ ದಿನಾಂಕ: 14.12.2006 ರಲ್ಲಿ ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ಮತ್ತು ಮುಖ್ಯ ಇಂಜಿನೀಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಸಹಮತಿಯನ್ನು ಕೋರಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಶ್ರೀ ಎ.ಸಿ.ಕುಮಾರಸ್ವಾಮಿ, ಕಿರಿಯ ಇಂಜಿನೀಯರ್ ಇವರು ಪರೀಕ್ಷಾರ್ಥ ಸೇವಾ ಅವಧಿಯನ್ನು ತೃಪ್ತಿಕರವಾಗಿ ಮುಗಿಸಿದ್ದು, ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿರುವ ಬಗ್ಗೆ ಹಾಗೂ ಡಿಪ್ಲೋಮಾ ಪದವಿಯನ್ನು ಸಿವಿಲ್ ಇಂಜಿನೀಯರಿಂಗ್‌ನಲ್ಲಿ ಪಾಸು ಮಾಡಿರುವ ಬಗ್ಗೆ ಸಂಬಂಧಿಸಿದ ಕಛೇರಿಯ ಅಧಿಕಾರಿಯವರು ದಾಖಲಾತಿ ಮಾಡಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ ನಿಯಮ, 1977ರ ನಿಯಮ 16(ಎ) ರಲ್ಲಿ ಸರ್ಕಾರದ ಒಂದು ಇಲಾಖೆಯಿಂದ ಮತ್ತೊಂದು ಇಲಾಖೆಗೆ ಸಮಾನ ವೇತನ ಶ್ರೇಣಿಯಲ್ಲಿನ ಹುದ್ದೆಗೆ ವರ್ಗಾವಣೆ ಹೊಂದಲು ಅವಕಾಶ ಕಲ್ಪಿಸಲಾಗಿರುತ್ತದೆ. ಸಧ್ಯ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಇವರು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿಯೇ ವಿಲೀನಗೊಳ್ಳಲು ಲೋಕೋಪಯೋಗಿ ಇಲಾಖೆಯ ಅಭ್ಯಂತರವೇನು ಇರುವುದಿಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿ ಲೋಕೋಪಯೋಗಿ ಇಲಾಖೆಯ ಕಾರ್ಯದರ್ಶಿಯವರಿಗೆ ಪತ್ರ ಬರೆದು ಪ್ರತಿಯನ್ನು ನಗರಾಭಿವೃದ್ಧಿ ಇಲಾಖೆಗೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3) ರಲ್ಲಿ ದಿನಾಂಕ: 27.10.1977ರ ಆದೇಶದಲ್ಲಿನ ಎಲ್ಲಾ ಷರತ್ತುಗಳನ್ನು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ವಿಲೀನಗೊಳ್ಳಲು ಇಚ್ಛಿಸುವ ಸರ್ಕಾರಿ ನೌಕರರು ಪೂರೈಸಿ, ಅದರಲ್ಲಿನ ಸೇವಾ ಷರತ್ತುಗಳಿಗೆ ಒಪ್ಪಿ, ಪುನಃ ಸರ್ಕಾರಿ ಸೇವೆಗೆ ಹಿಂದಿರುಗುವುದಿಲ್ಲವೆಂದು ಸ್ಪಷ್ಟವಾಗಿ ಒಪ್ಪಿರಬೇಕೆಂದು ಆದೇಶದಲ್ಲಿ ಸ್ಪಷ್ಟಪಡಿಸಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 96 ಅಪ್ರಾಸೇ 2006, ಬೆಂಗಳೂರು, ದಿನಾಂಕ: 13ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಶ್ರೀ ಎ.ಸಿ.ಕುಮಾರಸ್ವಾಮಿ, ಕಿರಿಯ ಇಂಜಿನೀಯರ್, ಲೋಕೋಪಯೋಗಿ ಇಲಾಖೆ ಇವರನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಕಿರಿಯ ಇಂಜಿನೀಯರ್ ಹುದ್ದೆಯಲ್ಲಿ ಅವರ ಸ್ವಂತ ಕೋರಿಕೆಯ ಮೇರೆಗೆ ಶಾಶ್ವತವಾಗಿ ವಿಲೀನಗೊಳಿಸಲಾಗಿದೆ.

1) ಸದರಿ ನೌಕರರು ಮಾತ್ರ ಇಲಾಖೆಯಲ್ಲಿನ ಜೇಷ್ಠತೆಯನ್ನು ಬಿಟ್ಟುಕೊಟ್ಟು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿನ ತತ್ಸಮಾನ ಪದವೃಂದದಲ್ಲಿನ ಕೊನೆಯ ಜೇಷ್ಠತೆಯನ್ನು ಹೊಂದತಕ್ಕದ್ದು.

2) ವರ್ಗಾವಣೆ/ಪ್ರಯಾಣ ಭತ್ಯೆಗೆ ಅರ್ಹರಿರುವುದಿಲ್ಲ ಮತ್ತು ತಮ್ಮ ಸಂಪೂರ್ಣ ಸೇವಾವಧಿಯಲ್ಲಿ ಕೇವಲ ಒಂದು ಸಲ ಮಾತ್ರ ಒಂದು ಜೇಷ್ಠತಾ ಘಟಕದಿಂದ ಇನ್ನೊಂದು ಜೇಷ್ಠತಾ ಘಟಕಕ್ಕೆ ವೃಂದ ಬದಲಾವಣೆ ಹೊಂದುವ ಅವಕಾಶ ಉಪಯೋಗಿಸಿಕೊಳ್ಳುತ್ತಿದ್ದು, ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ, 1977ರ ನಿಯಮ 16(ಎ)(ii) ಮತ್ತು ಕರ್ನಾಟಕ ನಾಗರೀಕ ಸೇವಾ ಜೇಷ್ಠತಾ ನಿಯಮಾವಳಿ, 1966ರ ನಿಯಮ 6 ರಲ್ಲಿನ ಎಲ್ಲಾ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

3) ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 70 ಎಸ್‌ಆರ್‌ಎಸ್ 77, ದಿನಾಂಕ: 27.10.1977 ರಲ್ಲಿನ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 1334 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀಮತಿ ಚೇತನಶ್ರೀ ಹೆಚ್.ಇ., 1999ನೇ ಸಾಲಿನ ಗೆಜೆಟೆಡ್ ಪ್ರೊಬೇಷನರ್ ತಹಶೀಲ್ದಾರ್‌ರವರು ನೀಡಿರುವ ರಾಜೀನಾಮೆಯನ್ನು ಅಂಗೀಕರಿಸುವ ಕುರಿತು.

**ಓದಲಾಗಿದೆ:** 1) ದಿನಾಂಕ: 25.01.2006ರ ಅಧಿಸೂಚನೆ ಸಂಖ್ಯೆ: ಕಂಇ 241 ಎಎಸ್‌ಡಿ 2005(1)

2) ಅ.ಜ್ಞಾ.ಸಂ.ಕಂಇ 241 ಎಎಸ್‌ಡಿ 2005, ದಿನಾಂಕ: 30.1.2006.

3) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 217 ಎಎಸ್‌ಡಿ 2006, ದಿನಾಂಕ: 7–5–2–2007.

4) ಶ್ರೀಮತಿ ಚೇತನಶ್ರೀ ಹೆಚ್.ಇ., ಇವರ ಮನವಿ ದಿನಾಂಕ: 25.5.2007.

**ಪ್ರಸ್ತಾವನೆ:**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1977ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: E(1)1235/2005–06/PSC, ದಿನಾಂಕ: 29.11.2005 ರನ್ವಯ ಆಯ್ಕೆಗೊಂಡ 1999ನೇ ಸಾಲಿನ 78 ಅಭ್ಯರ್ಥಿಗಳನ್ನು ಮೇಲೆ ಓದಲಾದ ಕ್ರ.ಸಂ.1ರ ದಿನಾಂಕ: 25.01.2006ರ ಸರ್ಕಾರದ ಅಧಿಸೂಚನೆಯಲ್ಲಿ ತಹಶೀಲ್ದಾರ್, ಗ್ರೂಪ್–ಬಿ ಹುದ್ದೆಗೆ ಪರಿವೀಕ್ಷಣೆಯ ಮೇಲೆ ನೇಮಿಸಲಾಗಿತ್ತು. ದಿನಾಂಕ: 20.1.2006ರ ಅಧಿಸೂಚನೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರರಾಗಿ ನೇಮಕಗೊಂಡ (ಕ್ರ.ಸಂ.44) ಶ್ರೀಮತಿ ಚೇತನಶ್ರೀ.ಹೆಚ್.ಇ., ಇವರು ದಿನಾಂಕ: 27.1.2006 ರಂದು ಕಂದಾಯ ಇಲಾಖೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರ್ ಹುದ್ದೆಗೆ ಹಾಜರಾಗಿರುತ್ತಾರೆ.

ಉಲ್ಲೇಖ (2)ರ ಅಧಿಕೃತ ಜ್ಞಾಪನದಲ್ಲಿ ಪರೀಕ್ಷಾರ್ಥ ತಹಶೀಲ್ದಾರರುಗಳಿಗೆ ದಿನಾಂಕ: 31.01.2006 ರಿಂದ 26.05.2006 ರವರೆಗೆ ತಾತ್ಕಾಲಿಕ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಲಾಗಿತ್ತು. ಅದರನ್ವಯ ಶ್ರೀಮತಿ ಚೇತನಶ್ರೀ.ಹೆಚ್.ಇ., ರವರು ಸದರಿ ತರಬೇತಿ ಕಾರ್ಯಕ್ರಮದಲ್ಲಿ ಹಾಜರಾಗಿದ್ದು, ನಂತರ ದಿನಾಂಕ: 7.4.2006ರ ಅಧಿಕೃತ ಜ್ಞಾಪನದಲ್ಲಿ ಜಿಲ್ಲಾ ಮಟ್ಟದ ತರಬೇತಿಗಾಗಿ ಮೈಸೂರು ಜಿಲ್ಲೆಗೆ ನಿಯೋಜಿಸಲಾಗಿತ್ತು. ಉಲ್ಲೇಖ (3)ರ ಅಧಿಸೂಚನೆಯಲ್ಲಿ ಶ್ರೀಮತಿ ಚೇತನಶ್ರೀ.ಹೆಚ್.ಇ., ಇವರನ್ನು ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ ತಹಶೀಲ್ದಾರರ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿರುತ್ತದೆ. ಈ ಮಧ್ಯೆಯಲ್ಲಿ ಸದರಿಯವರು ಸ್ಥಳ ನಿಯುಕ್ತಿಗೊಳಿಸಿದ ಸ್ಥಳಕ್ಕೆ ಕಾರ್ಯ ವರದಿ ಮಾಡಿಕೊಳ್ಳದೇ ಉಲ್ಲೇಖ (4) ದಿನಾಂಕ: 25.5.2007 ರಲ್ಲಿ ಜಿಲ್ಲಾಧಿಕಾರಿಗಳು ಮೈಸೂರು ಜಿಲ್ಲೆ ಇವರ ಮುಖಾಂತರ ಮನವಿಯನ್ನು ಸಲ್ಲಿಸಿ ತಮ್ಮ ವೈಯಕ್ತಿಕ ಕಾರಣಗಳಿಂದಾಗಿ ಸದರಿ ತಹಶೀಲ್ದಾರ್ ಹುದ್ದೆಗೆ ರಾಜೀನಾಮೆಯನ್ನು ನೀಡುತ್ತಿರುವುದಾಗಿ ಹಾಗೂ ರಾಜೀನಾಮೆಯನ್ನು ದಿನಾಂಕ: 28.5.2007 ರಿಂದ ಜಾರಿಗೆ ಬರುವಂತೆ ಅಂಗೀಕರಿಸಬೇಕೆಂದು ಶ್ರೀಮತಿ ಚೇತನಶ್ರೀ.ಹೆಚ್.ಇ., ಪರಿವೀಕ್ಷಣಾ ತಹಶೀಲ್ದಾರ್ ಇವರು ಕೋರಿರುತ್ತಾರೆ.

ಸದರಿ ಪರಿವೀಕ್ಷಣಾ ತಹಶೀಲ್ದಾರರ ರಾಜೀನಾಮೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 179 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 10ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀಮತಿ ಚೇತನಶ್ರೀ. ಹೆಚ್.ಇ, ಪರಿವೀಕ್ಷಣಾ ತಹಶೀಲ್ದಾರ್, 1999ನೇ ತಂಡ, ಇವರು ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ: 28.5.2007 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ದೇಸಾಯಿ**
ಪಿ.ಆರ್. 1335 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ವಿಷಯ:** ಶ್ರೀ ರುದ್ರಗೌಡ ಎಲ್.ಪಾಟೀಲ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1) (ದೋಣಿ ಮತ್ತು ಸಲಕರಣೆ), ಕಾರವಾರ ಇವರ ಸ್ವಇಚ್ಛಾ ನಿವೃತ್ತಿಗೆ ಅನುಮತಿ ಆದೇಶ.

**ಓದಲಾಗಿದೆ:** 1) ಶ್ರೀ ರುದ್ರಗೌಡ ಎಲ್.ಪಾಟೀಲ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1) ಇವರ ದಿನಾಂಕ: 29.03.2007ರ ಮನವಿ.
2) ಮೀನುಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ಪಿಇಎನ್/05/2007–08, ದಿನಾಂಕ: 01.06.2007.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಮನವಿಯ ಮೇರೆಗೆ ಮೀನುಗಾರಿಕೆ ನಿರ್ದೇಶಕರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ರುದ್ರಗೌಡ ಎಲ್.ಪಾಟೀಲ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1), ಮೀನುಗಾರಿಕೆ ಇಲಾಖೆ ಇವರು ವೈಯಕ್ತಿಕ ತೊಂದರೆಗಳಿಂದಾಗಿ ಸರ್ಕಾರಿ ಸೇವೆಯಲ್ಲಿ ಮುಂದುವರೆಯುವುದು ಕಠಿಣವಾಗಿದೆಯೆಂದು ತಿಳಿಸಿ ಸದರಿಯವರು ದಿನಾಂಕ: 30.06.2007 ರಿಂದ ಸ್ವಇಚ್ಛಾ ನಿವೃತ್ತಿ ಕೋರಿ ಮನವಿ ಸಲ್ಲಿಸಿರುತ್ತಾರೆಂದು, ಹಾಗೂ ಈ ಅಧಿಕಾರಿಯು ಈ ಹಿಂದೆ ಕರ್ತವ್ಯನಿರ್ವಹಿಸಿದ ಕಛೇರಿಗಳಿಂದ ಬಂದಿರುವ ಮಾಹಿತಿಯಂತೆ ಇವರ ವಿರುದ್ಧ ಇಲಾಖಾ ವಿಚಾರಣೆ/ಸರ್ಕಾರಕ್ಕೆ ಬರಬೇಕಾದ ಬಾಕಿ ಏನು ಇಲ್ಲವೆಂದು ತಿಳಿಸಿರುತ್ತಾರೆಂದು, ಆದಾಗ್ಯೂ, ಶ್ರೀ ರುದ್ರಗೌಡ ಎಲ್.ಪಾಟೀಲ ಇವರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದಲ್ಲಿ, ವಸೂಲಾತಿಯ ಷರತ್ತಿಗೊಳಪಟ್ಟು ಮತ್ತು ಸದರಿ ಅಧಿಕಾರಿಯವರ ಮೇಲೆ ವಿಚಾರಣೆ ಬಾಕಿ ಇದ್ದಲ್ಲಿ ಅದನ್ನು ಮುಂದುವರೆಸುವ ಅಥವಾ ವಿಚಾರಣೆಗೊಳಪಡಿಸುವ ಬಗ್ಗೆ ಕ್ರಮ ಬಾಕಿ ಇದ್ದಲ್ಲಿ ವಿಚಾರಣೆಗೆ ಒಳಪಡಿಸುವ ಷರತ್ತಿಗೊಳಪಟ್ಟು ದಿನಾಂಕ: 30.06.2007 ರಿಂದ ಅನ್ವಯವಾಗುವಂತೆ ಸದರಿ ಅಧಿಕಾರಿಗೆ ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಿರುತ್ತಾರೆ. ಸದರಿ ಅಧಿಕಾರಿಯ ಮನವಿಯನ್ನು ಹಾಗೂ ಮೀನುಗಾರಿಕೆ ನಿರ್ದೇಶಕರ ಶಿಫಾರಸ್ಸು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 74 ಮೀಇಸೇ 2007, ಬೆಂಗಳೂರು, ದಿನಾಂಕ: 19ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ರುದ್ರಗೌಡ ಎಲ್.ಪಾಟೀಲ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1), ಮೀನುಗಾರಿಕೆ ಇಲಾಖೆ, ಇವರಿಂದ ಸರ್ಕಾರಕ್ಕೆ ಬಾಕಿ ಬರಬೇಕಾಗಿದ್ದಲ್ಲಿ ಅದನ್ನು ಅವರ ನಿವೃತ್ತಿ ಸೌಲಭ್ಯಗಳಿಂದ ವಸೂಲಾತಿಯ ಷರತ್ತಿಗೊಳಪಟ್ಟು ಮತ್ತು ಸದರಿ ಅಧಿಕಾರಿಯ ಮೇಲೆ ಇಲಾಖಾ ವಿಚಾರಣೆ ಬಾಕಿಯಿದ್ದಲ್ಲಿ ಅದನ್ನು ಮುಂದುವರೆಸುವ ಅಥವಾ ಇಲಾಖಾ ವಿಚಾರಣೆ ಒಳಪಡಿಸುವ ಕ್ರಮ ಬಾಕಿಯಿದ್ದಲ್ಲಿ ಇಲಾಖಾ ವಿಚಾರಣೆಗೆ ಒಳಪಡಿಸುವ ಷರತ್ತಿಗೊಳಪಟ್ಟು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ 1957ರ ನಿಯಮ 285(1)(ಎ)(2) ರನ್ವಯ ದಿನಾಂಕ: 31.07.2007 ರಿಂದ ಜಾರಿಗೆ ಬರುವಂತೆ ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಸಾಯಿಬಾಬಾ**
ಪಿ.ಆರ್. 1336 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ದಿ ಕರ್ನಾಟಕ ಪ್ರವಾಸಿ ಗ್ಯಾಸೆಟಿಯರ್ ಅನ್ನು ಪ್ರಕಟಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಪ್ರವಾಸೋದ್ಯಮ ಇಲಾಖೆ ರವರ ಕಡತ ಸಂಖ್ಯೆ: ಪ್ರಇ/ಪ್ರಚಾರ/36/2005–06.

**ಪ್ರಸ್ತಾವನೆ:**

ಮೇಲೆ ಓದಲಾದ ಕಡತದಲ್ಲಿ ಆಯುಕ್ತರು ಪ್ರವಾಸೋದ್ಯಮ ಇಲಾಖೆ ಇವರು ಕರ್ನಾಟಕ ಪ್ರವಾಸಿ ಗ್ಯಾಸೆಟಿಯರ್ ಎಂಟು ಸಾವಿರ ಪ್ರತಿಗಳನ್ನು ಪ್ರವಾಸೋದ್ಯಮ ಇಲಾಖೆಯು ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯ ಸಹಯೋಗದೊಂದಿಗೆ ಮೆ: ಅಭಿಮಾನಿ ಪ್ರಕಾಶನ, ಬೆಂಗಳೂರು ಇವರಿಂದ ಮುದ್ರಿಸಿ ಪಡೆದುಕೊಳ್ಳಲು ಕಾರ್ಯದೇಶ ನೀಡಲಾಗಿರುತ್ತದೆಂದು ಸದರಿ ಮುದ್ರಣ ಕಾರ್ಯ ಮುಕ್ತಾಯದ ಹಂತದಲ್ಲಿ ಇರುತ್ತದೆಂದು ವರದಿ ಮಾಡುತ್ತಾ ಈ ನಾಲ್ಕು ಸಂಪುಟಗಳ ಮುದ್ರಣ ಮುಖ ಬೆಲೆಯನ್ನು ಈ ಕೆಳಕಂಡಂತೆ ನಿಗದಿಪಡಿಸಲು ಪ್ರಸ್ತಾಪಿಸುತ್ತಾ ಸರ್ಕಾರದ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ.

| | | | |
|---|---|---|---|
| 1 | ಸಂಪುಟ–I | ಪುಸ್ತಕಕ್ಕೆ | ರೂ. 410–00 |
| 2 | ಸಂಪುಟ–II | ಪುಸ್ತಕಕ್ಕೆ | ರೂ. 410–00 |
| 3 | ಸಂಪುಟ–III | ಪುಸ್ತಕಕ್ಕೆ | ರೂ. 310–00 |
| 4 | ಸಂಪುಟ–IV | ಪುಸ್ತಕಕ್ಕೆ | ರೂ. 310–00 |
| | | **ಒಟ್ಟು** | **ರೂ.1440–00** |

ಎಲ್ಲಾ ಸಂಪುಟಗಳನ್ನು ಒಂದೇ ಬಾರಿಗೆ ಖರೀದಿಸಿದಲ್ಲಿ ಶೇಕಡ 31 ರಷ್ಟು ರಿಯಾಯಿತಿ ದರದಲ್ಲಿ ರೂ. 440–00 ಗಳನ್ನು ಕಡಿತಗೊಳಿಸಿ ಒಟ್ಟು ರೂ.1000–00 ಗಳಿಗೆ ಬೆಲೆ ನಿಗದಿಪಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 403 ಪ್ರವಾಯೋ 2006, ಬೆಂಗಳೂರು, ದಿನಾಂಕ: 17ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರವಾಸೋದ್ಯಮ ಇಲಾಖೆಯು ಮೆ: ಅಭಿಮಾನಿ ಪ್ರಕಾಶನ ರವರಿಂದ ಕರ್ನಾಟಕ ಪ್ರವಾಸಿ ಗ್ಯಾಸೇಟಿಯರ್‌ಗಳ ನಾಲ್ಕು ಸಂಪುಟಗಳ ಮುದ್ರಣ ಮಾಡಿಸಿದ್ದು ಸದರಿ ಪ್ರವಾಸಿ ಗ್ಯಾಸೇಟಿಯರ್‌ನ ಪ್ರತಿಯೊಂದು ಸಂಪುಟದ ಮುಖ ಬೆಲೆಯನ್ನು ಈ ಕೆಳಕಂಡಂತೆ ನಿಗದಿಪಡಿಸಿ ಸರ್ಕಾರದ ಅನುಮೋದನೆ ನೀಡಲಾಗಿದೆ.

| | | | |
|---|---|---|---|
| 1 | ಸಂಪುಟ–I | ಪುಸ್ತಕಕ್ಕೆ | ರೂ. 410–00 |
| 2 | ಸಂಪುಟ–II | ಪುಸ್ತಕಕ್ಕೆ | ರೂ. 410–00 |
| 3 | ಸಂಪುಟ–III | ಪುಸ್ತಕಕ್ಕೆ | ರೂ. 310–00 |
| 4 | ಸಂಪುಟ–IV | ಪುಸ್ತಕಕ್ಕೆ | ರೂ. 310–00 |
| | | **ಒಟ್ಟು** | **ರೂ.1440–00** |

ಎಲ್ಲಾ ಸಂಪುಟಗಳನ್ನು ಒಂದೇ ಬಾರಿಗೆ ಖರೀದಿಸಿದಲ್ಲಿ ಶೇಕಡ 31 ರಷ್ಟು ರಿಯಾಯಿತಿ ದರದಲ್ಲಿ ರೂ.440–00 ಗಳನ್ನು ಕಡಿತಗೊಳಿಸಿ ಒಟ್ಟು ರೂ.1000–00 ಗಳ ಬೆಲೆಯನ್ನು ನಿಗದಿಪಡಿಸಿ ಮಾರಾಟ ಮಾಡಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾರಾಯಣಪ್ಪ**

ಪಿ.ಆರ್. 1337

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ರಾಜ್ಯದ ವಿವಿಧ ದರ್ಜೆಯ ನ್ಯಾಯಾಲಯಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 47 ಎಲ್‌ಸಿಇ 2004, ದಿನಾಂಕ: 23.06.2005.
2) ಸರ್ಕಾರಿ ಆದೇಶ ಸಂಖ್ಯೆ: ಲಾ 47 ಎಲ್‌ಸಿಇ 2004, ದಿನಾಂಕ: 31.03.2006.
3) ಸರ್ಕಾರಿ ಆದೇಶ ಸಂಖ್ಯೆ: ಲಾ 47 ಎಲ್‌ಸಿಇ 2004 (ಭಾಗ–1), ದಿನಾಂಕ: 30.05.2006.
4) ಸರ್ಕಾರಿ ಆದೇಶ ಸಂಖ್ಯೆ: ಲಾ 47 ಎಲ್‌ಸಿಇ 2004, ದಿನಾಂಕ: 25.07.2006.
5) ಸರ್ಕಾರಿ ಆದೇಶ ಸಂಖ್ಯೆ: ಲಾ 78 ಎಲ್‌ಸಿಇ 2006, ದಿನಾಂಕ: 30.08.2006.
6) ಸರ್ಕಾರಿ ಆದೇಶ ಸಂಖ್ಯೆ: ಲಾ 129 ಎಲ್‌ಸಿಇ 2006, ದಿನಾಂಕ: 18.09.2006
7) ಸರ್ಕಾರಿ ಆದೇಶ ಸಂಖ್ಯೆ: ಲಾ 47 ಎಲ್‌ಸಿಇ 2004 (ಭಾಗ–1), ದಿನಾಂಕ: 12.10.2006
8) ಸರ್ಕಾರಿ ಆದೇಶ ಸಂಖ್ಯೆ: ಲಾ 202 ಎಲ್‌ಸಿಇ 2006, ದಿನಾಂಕ: 2.03.2007.
9) ಸರ್ಕಾರಿ ಆದೇಶ ಸಂಖ್ಯೆ: ಲಾ 238 ಎಲ್‌ಸಿಇ 2006, ದಿನಾಂಕ: 7.03.2007.
10) ಪತ್ರ ಸಂಖ್ಯೆ: ಜಿಓಬಿ–II–64/2005, ದಿನಾಂಕ: 01.03.2007.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿ ವಿವಿಧ ದರ್ಜೆಯ 90 ನ್ಯಾಯಾಲಯಗಳನ್ನು ಸ್ಥಾಪಿಸಲು ಸರ್ಕಾರದ ಮಂಜೂರಾತಿ ನೀಡಲಾಯಿತು. ಮೇಲೆ (2) (3) (4) (5) (6) (7) (8) ಮತ್ತು (9) ರಲ್ಲಿ ಓದಲಾದ ಆದೇಶದಲ್ಲಿ ಒಟ್ಟು 48 ವಿವಿಧ ದರ್ಜೆಯ ಹೊಸ ನ್ಯಾಯಾಲಯಗಳನ್ನು ಪ್ರಾರಂಭಿಸುವುದಕ್ಕೆ ಬೇಕಾಗಿರುವ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ನಂತರ ರಿಜಿಸ್ಟ್ರಾರ್ ಜನರಲ್, ಉಚ್ಚ ನ್ಯಾಯಾಲಯ ಮೇಲೆ ಕ್ರಮ ಸಂಖ್ಯೆ 10 ರಲ್ಲಿ ಓದಲಾದ ಪತ್ರದಲ್ಲಿ ರಾಜ್ಯದ ಈ ಕೆಳಕಂಡ ಸ್ಥಳಗಳಲ್ಲಿ ಸಂಬಂಧಪಟ್ಟ ನ್ಯಾಯಾಲಯಗಳನ್ನು ಸ್ಥಾಪಿಸಲು ಕಟ್ಟಡ ಲಭ್ಯವಿರುವುದಾಗಿ ತಿಳಿಸಿರುತ್ತಾರೆ.

a) ಬೆಳಗಾವಿಯಲ್ಲಿ ಭ್ರಷ್ಟಾಚಾರ ನಿಷೇಧ ಕಾಯ್ದೆಯಡಿ ಪ್ರಕರಣಗಳ ವಿಚಾರಣೆಗಾಗಿ ವಿಶೇಷ ನ್ಯಾಯಾಲಯ (ಜಿಲ್ಲಾ ನ್ಯಾಯಾಧೀಶರ ಶ್ರೇಣಿ).

b) ಬೆಳಗಾವಿಯಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯ ಅಪರಾಧ ಪ್ರಕರಣಗಳ ವಿಚಾರಣೆಗಾಗಿ ವಿಶೇಷ ನ್ಯಾಯಾಲಯ (ಜಿಲ್ಲಾ ನ್ಯಾಯಾಧೀಶರ ಶ್ರೇಣಿ).

c) ಬೆಳಗಾವಿಯಲ್ಲಿ ವರದಕ್ಷಿಣೆ ಸಾವು ಅಪರಾಧ ಪ್ರಕರಣಗಳ ವಿಚಾರಣೆಗಾಗಿ ವಿಶೇಷ ನ್ಯಾಯಾಲಯ (ಜಿಲ್ಲಾ ನ್ಯಾಯಾಧೀಶರ ಶ್ರೇಣಿ).

d) 4ನೇ ಹೆಚ್ಚುವರಿ ಸಿವಿಲ್ ಜಡ್ಜ್ (ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ಮೈಸೂರು.

e) 2ನೇ ಹೆಚ್ಚುವರಿ ಸಿವಿಲ್ ಜಡ್ಜ್ (ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ಗೋಕಾಕ್.

f) ಹೆಚ್ಚುವರಿ ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ಹುನಗುಂದ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 113 ಎಲ್‌ಸಿಇ 2007, ಬೆಂಗಳೂರು, ದಿನಾಂಕ: 16ನೇ ಜುಲೈ 2007**

ಉಲ್ಲೇಖಿತ ಸ್ಥಳಗಳಲ್ಲಿ ಸಂಬಂಧಪಟ್ಟ ನ್ಯಾಯಾಲಯಗಳನ್ನು ಪ್ರಾರಂಭಿಸಲು ಇದಕ್ಕೆ ಲಗತ್ತಿಸಿರುವ ಅನುಬಂಧ–ಎ, ಅನುಬಂಧ–ಬಿ, ಅನುಬಂಧ–ಸಿ, ಅನುಬಂಧ–ಡಿ ಮತ್ತು ಅನುಬಂಧ–ಇ ರಲ್ಲಿ ನಮೂದಿಸಿರುವಂತೆ ಹುದ್ದೆಗಳನ್ನು ಸೃಜಿಸುವುದರ ಜೊತೆಗೆ ಆ ಸಂಬಂಧದ ಆವರ್ತ ಮತ್ತು ಅನಾವರ್ತ ವೆಚ್ಚ ಭರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಸಂಬಂಧದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014–00–105–0–01 (ಯೋಜನೇತರ)" ಅಡಿ ಭರಿಸುವುದು.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 541 ವೆಚ್ಚ–7:2007, ದಿನಾಂಕ: 02.06.2007 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಅನುಬಂಧ–ಎ**

**ಬೆಳಗಾವಿಯಲ್ಲಿ ಭ್ರಷ್ಟಾಚಾರ ನಿಷೇಧ ಕಾಯ್ದೆಯಡಿ ಪ್ರಕರಣಗಳ ವಿಚಾರಣೆಗಾಗಿ ವಿಶೇಷ ನ್ಯಾಯಾಲಯಕ್ಕೆ ಸೃಜಿಸಲಾದ ಹುದ್ದೆಗಳ ವಿವರ:**

**(4ನೇ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶರು)**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಜಿಲ್ಲಾ ನ್ಯಾಯಾಧೀಶರು | 01 |
| 2 | ತೀರ್ಪು ಬರಹಗಾರ | 01 |
| 3 | ಪ್ರಥಮ ದರ್ಜೆ ಸಹಾಯಕರು | 01 |
| 4 | ಬೆರಳಚ್ಚುಗಾರ | 01 |
| 5 | ಅಟೆಂಡರ್ | 01 |
| 6 | ಪ್ಯೂನ್ಸ್ | 02 |
| | **ಒಟ್ಟು** | **07** |

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಅನುಬಂಧ–ಬಿ**

**ಬೆಳಗಾವಿಯಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯ ಅಪರಾಧ ಪ್ರಕರಣಗಳ ವಿಚಾರಣೆಗಾಗಿ ವಿಶೇಷ ನ್ಯಾಯಾಲಯಕ್ಕೆ ಸೃಜಿಸಲಾದ ಹುದ್ದೆಗಳ ವಿವರ:**

**(5ನೇ ಹೆಚ್ಚುವರಿ ಜಿಲ್ಲಾ ಸತ್ರ ನ್ಯಾಯಾಧೀಶರು)**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಜಿಲ್ಲಾ ನ್ಯಾಯಾಧೀಶರು | 01 |
| 2 | ಶಿರಸ್ತೇದಾರ್ | 02 |
| 3 | ಜಡ್ಜ್‌ಮೆಂಟ್ ರೈಟರ್ | 01 |
| 4 | ಶೀಘ್ರಲಿಪಿಗಾರರು | 01 |
| 5 | ಪ್ರಥಮ ದರ್ಜೆ ಸಹಾಯಕರು | 02 |
| 6 | ದ್ವಿತೀಯ ದರ್ಜೆ ಸಹಾಯಕರು | 02 |

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 7 | ಬೆರಳಚ್ಚುಗಾರ | 02 |
| 8 | ಅಟೆಂಡರ್ | 01 |
| 9 | ಪ್ಯೂನ್ | 01 |
| | ಒಟ್ಟು | 13 |

ಇ. ಶಿವಾನಂದ

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಅನುಬಂಧ-ಸಿ**

**ಬೆಳಗಾವಿಯಲ್ಲಿ ವರದಕ್ಷಿಣೆ ಸಾವು ಅಪರಾಧ ಪ್ರಕರಣಗಳ ವಿಚಾರಣೆಗಾಗಿ ವಿಶೇಷ ನ್ಯಾಯಾಲಯಕ್ಕೆ ಸೃಜಿಸಲಾದ ಹುದ್ದೆಗಳ ವಿವರ:**

**(6ನೇ ಹೆಚ್ಚುವರಿ ಜಿಲ್ಲಾ ಸತ್ರ ನ್ಯಾಯಾಧೀಶರು)**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಜಿಲ್ಲಾ ನ್ಯಾಯಾಧೀಶರು | 01 |
| 2 | ಶಿರಸ್ತೇದಾರ್ | 02 |
| 3 | ಜಡ್ಜ್‌ಮೆಂಟ್ ರೈಟರ್ | 01 |
| 4 | ಶೀಘ್ರಲಿಪಿಗಾರರು | 01 |
| 5 | ಪ್ರಥಮ ದರ್ಜೆ ಸಹಾಯಕರು | 02 |
| 6 | ದ್ವಿತೀಯ ದರ್ಜೆ ಸಹಾಯಕರು | 02 |
| 7 | ಬೆರಳಚ್ಚುಗಾರ | 02 |
| 8 | ಅಟೆಂಡರ್ | 01 |
| 9 | ಪ್ಯೂನ್ | 01 |
| | ಒಟ್ಟು | 13 |

ಇ. ಶಿವಾನಂದ

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಅನುಬಂಧ-ಡಿ**

**4ನೇ ಹೆಚ್ಚುವರಿ ಸಿವಿಲ್ ಜಡ್ಜ್ (ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ಮೈಸೂರು ನ್ಯಾಯಾಲಯಕ್ಕೆ ಸೃಜಿಸಲಾದ ಹುದ್ದೆಗಳ ವಿವರ: ಮತ್ತು 2ನೇ ಹೆಚ್ಚುವರಿ ಸಿವಿಲ್ ಜಡ್ಜ್ (ಹಿ.ವಿ.) ಜೆಎಂಎಫ್‌ಸಿ, ಗೋಕಾಕ್ ನ್ಯಾಯಾಲಯಕ್ಕೆ ಸೃಜಿಸಲಾದ ಹುದ್ದೆಗಳ ವಿವರ**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸಿವಿಲ್ ಜಡ್ಜ್ (ಹಿ.ವಿ.) | 01 |
| 2 | ಶೀಘ್ರಲಿಪಿಗಾರರು | 01 |
| 3 | ಪ್ರಥಮ ದರ್ಜೆ ಸಹಾಯಕರು | 01 |
| 4 | ಬೆರಳಚ್ಚುಗಾರ | 01 |
| 5 | ಅಟೆಂಡರ್ | 01 |
| 6 | ಪ್ಯೂನ್ | 02 |
| | ಒಟ್ಟು | 07 |

ಇ. ಶಿವಾನಂದ

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಅನುಬಂಧ-ಇ**

**ಹೆಚ್ಚುವರಿ ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ಹುನಗುಂದ) ನ್ಯಾಯಾಲಯಕ್ಕೆ ಸೃಜಿಸಲಾದ ಹುದ್ದೆಗಳ ವಿವರ**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸಿವಿಲ್ ಜಡ್ಜ್ (ಕಿ.ವಿ.) | 01 |
| 2 | ಶೀಘ್ರಲಿಪಿಗಾರರು | 01 |

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 3 | ಪ್ರಥಮ ದರ್ಜೆ ಸಹಾಯಕರು | 01 |
| 4 | ಬೆರಳಚ್ಚುಗಾರ | 01 |
| 5 | ಅಟೆಂಡರ್ | 01 |
| 6 | ಪ್ಯೂನ್ಸ್ | 02 |
| | ಒಟ್ಟು | 07 |

ಇ. ಶಿವಾನಂದ

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),

ಪಿ.ಆರ್. 1338 ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** ಸುಳ್ಳು ಜಾತಿ ಪ್ರಮಾಣ ಪತ್ರ ಪಡೆದವರ ವಿರುದ್ಧ ಸರ್ಕಾರದ ಪರವಾಗಿ ವ್ಯಾಜ್ಯವನ್ನು ನಿರ್ವಹಿಸಲು ಶ್ರೀ ಸಿ.ಜಗದೀಶ್, ವಕೀಲರು, ಇವರನ್ನು ವಿಶೇಷ ನ್ಯಾಯವಾದಿಯಾಗಿ ನೇಮಿಸುವ ಬಗ್ಗೆ – ಆದೇಶ.

**ಓದಲಾಗಿದೆ:** 1) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ಸಕನಿ/ಉ ಮತ್ತು ತ/ಸಿಆರ್–59/05–06, ದಿನಾಂಕ: 29.07.2006.

2) ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಜಾವಿ:ಸಾಮಾನ್ಯ:ನಾಹಜಾನಿ:06, ದಿನಾಂಕ: 06.09.06.

3) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್: ಎಡಿಎಂ:213:2005–06, ದಿನಾಂಕ: 25.08.06.

**ಪ್ರಸ್ತಾವನೆ:**

ಸುಳ್ಳು ಜಾತಿ ಪ್ರಮಾಣ ಪತ್ರಗಳನ್ನು ಪಡೆದು ಸರ್ಕಾರಿ ನೌಕರಿ ಹಾಗೂ ಮತ್ತಿತರ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆಂದು ಇವರ ವಿರುದ್ಧ ನ್ಯಾಯಾಲಯಗಳಲ್ಲಿ ಹೂಡಲಾದ ದಾವೆಗಳನ್ನು ಸಮರ್ಪಕವಾಗಿ ನಿರ್ವಹಿಸಲು ಶ್ರೀ ಸಿ.ಜಗದೀಶ್, ಉಚ್ಚ ನ್ಯಾಯಾಲಯದ ವಕೀಲರು, ಇವರನ್ನು ವಿಶೇಷ ನ್ಯಾಯವಾದಿಯನ್ನಾಗಿ ನೇಮಿಸುವಂತೆ ದಲಿತ ಒಕ್ಕೂಟ ಸಮಿತಿಯವರು ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಈ ಬೇಡಿಕೆಯನ್ನು ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಮತ್ತು ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ ಇವರನ್ನು ಕೋರಲಾಗಿತ್ತು. ಮೇಲೆ ಓದಲಾದ (1)ರ ಪತ್ರದಲ್ಲಿ ಭೋವಿ ಜಾತಿ ಹಾಗೂ ಮೊಗೇರ ಜಾತಿಗಳಿಗೆ ಸಂಬಂಧಪಟ್ಟಂತೆ ನ್ಯಾಯಾಲಯಗಳು ನೀಡಿರುವ ತೀರ್ಪಿನ ಮೇರೆಗೆ ಸರ್ಕಾರದ ಪರವಾಗಿ ಮೇಲ್ಮನವಿ ಸಲ್ಲಿಸಲಾಗಿದ್ದು, ಇಂತಹ ಪ್ರಕರಣಗಳನ್ನು ಶ್ರೀ ಸಿ.ಜಗದೀಶ್‌ರವರಿಗೆ ವಹಿಸಿಕೊಡಬಹುದಾಗಿದ್ದು, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯದಿಂದ ಬರುವ ಮಾಹಿತಿಗೆ ಅನುಗುಣವಾಗಿ ಎಷ್ಟು ಪ್ರಕರಣಗಳನ್ನು ಇವರಿಗೆ ವಹಿಸಿಕೊಡಬಹುದು ಎಂದು ಆಯುಕ್ತರು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ. ನ್ಯಾಯಾಲಯಗಳಲ್ಲಿ ಬಾಕಿ ಇರುವ ವ್ಯಾಜ್ಯಗಳ ಬಗ್ಗೆ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ ಮತ್ತು ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರಿಂದ ಮಾಹಿತಿಯನ್ನು ಪಡೆದು ಪರಿಶೀಲಿಸಲಾಯಿತು.

ಮೇಲೆ ಓದಲಾದ (2)ರ ಪತ್ರದಲ್ಲಿ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ ಇವರು ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯದಲ್ಲಿ ಸುಳ್ಳು ಜಾತಿ ಪ್ರಮಾಣ ಪತ್ರ ಪಡೆದು ಉದ್ಯೋಗ ಪಡೆದಿರುವ ನೌಕರರ ಒಟ್ಟು 72 ಪ್ರಕರಣಗಳು ಮತ್ತು (3)ನೇ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ನೀಡಿದ ಮಾಹಿತಿಯಂತೆ 39 ಪ್ರಕರಣಗಳು ವಿವಿಧ ಎ.ಸಿ.ಎಂ.ಎಂ./ಜೆ.ಎಂ.ಎಫ್.ಸಿ. ನ್ಯಾಯಾಲಯಗಳಲ್ಲಿ ದಾಖಲಾಗಿರುತ್ತವೆ ಎಂದು ವಿವರಗಳನ್ನು ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಸುಳ್ಳು ಜಾತಿ ಪ್ರಮಾಣ ಪತ್ರ ಪಡೆದಿರುವವರ ವಿರುದ್ಧ ವಿವಿಧ ನ್ಯಾಯಾಲಯಗಳಲ್ಲಿ ಹೂಡಲಾದ ಪ್ರಕರಣಗಳನ್ನು ಸರ್ಕಾರದ ಪರವಾಗಿ ತ್ವರಿತವಾಗಿ ಹಾಗೂ ಪರಿಣಾಮಕಾರಿಯಾಗಿ ಪ್ರತಿವಾದಿಸುವ ದೃಷ್ಟಿಯಿಂದ ಶ್ರೀ ಸಿ.ಜಗದೀಶ್, ವಕೀಲರು ಇವರನ್ನು ವಿಶೇಷ ನ್ಯಾಯವಾದಿಯಾಗಿ ನೇಮಿಸಲು ತೀರ್ಮಾನಿಸಲಾಗಿದೆ. ಅಂತೆಯೇ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 38 ಎಸ್‌ಎಡಿ 2005, ಬೆಂಗಳೂರು, ದಿನಾಂಕ: 2ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯನ್ನಾಧರಿಸಿ, ಸುಳ್ಳು ಜಾತಿ ಪ್ರಮಾಣ ಪತ್ರ ಪಡೆದಿರುವವರ ವಿರುದ್ಧ ವಿವಿಧ ನ್ಯಾಯಾಲಯಗಳಲ್ಲಿ ಹೂಡಲಾದ ಪ್ರಕರಣಗಳಲ್ಲಿ ಸರ್ಕಾರದ ಪರವಾಗಿ ಪ್ರಕರಣವನ್ನು ತ್ವರಿತವಾಗಿ ಹಾಗೂ ಪರಿಣಾಮಕಾರಿಯಾಗಿ ಪ್ರತಿಪಾದಿಸಲು ಶ್ರೀ ಸಿ.ಜಗದೀಶ್, ಉಚ್ಚ ನ್ಯಾಯಾಲಯದ ವಕೀಲರು, ನಂ.22, 2ನೇ ಮಹಡಿ, 1ನೇ ಮುಖ್ಯರಸ್ತೆ, ನೆಹರೂ ನಗರ, ರೆಡ್ಡಿ ಪೆಟ್ರೋಲ್ ಬಂಕ್ ಹತ್ತಿರ, ಶೇಷಾದ್ರಿಪುರಂ, ಬೆಂಗಳೂರು ಇವರನ್ನು ವಿಶೇಷ ನ್ಯಾಯವಾದಿಯಾಗಿ (Special Council) ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಿದೆ.

ಈ ಸಂಬಂಧ ಸದರಿ ವಕೀಲರಿಗೆ ಈ ಕೆಳಕಂಡಂತೆ ಶುಲ್ಕವನ್ನು ನೀಡಲು ಈ ಶುಲ್ಕವನ್ನು SCSP/TSP Pooled Fund ನಿಂದ ಪಡೆದು ಮೀಸಲಿಟ್ಟ ಹಣದಿಂದ ಭರಿಸತಕ್ಕದ್ದು. ಸದರಿ ವಕೀಲರು ಸಲ್ಲಿಸುವ ಬಿಲ್ಲುಗಳನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಪರಿಶೀಲಿಸಿ ಮಂಜೂರು ಮಾಡತಕ್ಕದ್ದು.

| | | |
|---|---|---|
| (1) Reading fee | - | Rs.5,000.00 per case |
| (2) Hearing fee | - | Rs. 250.00 per day per case |
| (3) Junior fee | - | Rs.1,000.00 per case |
| (4) Clerical and Miscellaneous fee | - | Rs.1,000.00 per case |

ಸದರಿಯವರು ವ್ಯಾಜ್ಯಗಳ ಇತ್ಯರ್ಥದ ಬಗ್ಗೆ ಪೂರ್ಣ ವಿವರಗಳೊಂದಿಗೆ ತ್ರೈಮಾಸಿಕ ವರದಿಯನ್ನು ಸರ್ಕಾರಕ್ಕೆ ಕಾಲಕಾಲಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 172 ವೆಚ್ಚ–3/07, ದಿನಾಂಕ: 11.06.2007 ರನ್ವಯ ಹಾಗೂ ಸಂಖ್ಯೆ: ಎಲ್‌ಎಸ್ 1553, ದಿನಾಂಕ: 23.06.2007 ರಲ್ಲಿ ಕಾನೂನು ಇಲಾಖೆಯ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಂ. ಚಿದಾನಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1340

**ವಿಷಯ:** ರಾಜ್ಯದಲ್ಲಿ ಅಲ್ಪಸಂಖ್ಯಾತರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ 2007–08ನೇ ಸಾಲಿನಲ್ಲಿ ವಸತಿ ಶಾಲೆ ತೆರೆಯುವ ಬಗ್ಗೆ.

**ಓದಲಾಗಿದೆ:** 1) 2006–07ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವ ಬಗ್ಗೆ.
2) ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಅಸಂನಿ/ವಿನಿ/ಸಿಆರ್–8/2007–08, ದಿನಾಂಕ: 22.05.2007.

**ಪ್ರಸ್ತಾವನೆ:**

2007–08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರು ಹಾಗೂ ಆರ್ಥಿಕ ಸಚಿವರು ರಾಜ್ಯದಲ್ಲಿ ಅಲ್ಪಸಂಖ್ಯಾತರ ವಿದ್ಯಾರ್ಥಿಗಳ ಅಭಿವೃದ್ಧಿಗಾಗಿ ಒಟ್ಟು 7 ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ತೆರೆಯಲು ಘೋಷಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (2) ರಲ್ಲಿ ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಇವರು ಪ್ರಸ್ತಾವನೆ ಸಲ್ಲಿಸಿ, 2007–08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ನಿಗದಿಪಡಿಸಿರುವಂತೆ ರಾಜ್ಯದಲ್ಲಿ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗಾಗಿ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ಪ್ರಾರಂಭಿಸಲು ಪ್ರಸ್ತಾಪಿಸಿರುತ್ತಾರೆ.

ಅದರಂತೆ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 105 ಅಸಂಯೋ 2007, ಬೆಂಗಳೂರು, ದಿನಾಂಕ: 30ನೇ ಜೂನ್ 2007**

ಅಲ್ಪಸಂಖ್ಯಾತರ ವರ್ಗದ ಮಕ್ಕಳ ವಿದ್ಯಾಭ್ಯಾಸಕ್ಕಾಗಿ 2007–08ನೇ ಸಾಲಿನಿಂದ ಜಾರಿಗೆ ಬರುವಂತೆ ಈ ಕೆಳಕಂಡ ಸ್ಥಳಗಳಲ್ಲಿ ಚಾಲ್ತಿಯಲ್ಲಿರುವ Staffing Pattern ರನ್ವಯ ಪ್ರಥಮ ಭಾಷೆ ಕನ್ನಡ, 2ನೇ ಉರ್ದು ಭಾಷೆಗಳಲ್ಲಿ ಭೋದಿಸುವ ಜೊತೆಗೆ ಸದರಿ ವಸತಿ ಶಾಲೆಗಳ ಮಾಧ್ಯಮ ಆಂಗ್ಲ ಭಾಷೆಯಲ್ಲಿ ಪ್ರಾರಂಭಿಸುವಂತೆ ಆದೇಶಿಸಿದೆ.

1. ಚಡಚಣ, ಇಂಡಿ ತಾಲ್ಲೂಕು, ಬಿಜಾಪೂರ ಜಿಲ್ಲೆ.
2. ಚಿತ್ತಾಪೂರ, ಗುಲ್ಬರ್ಗಾ ಜಿಲ್ಲೆ, ದಂಡೋತಿ ಗ್ರಾಮ.
3. ಕುಣಿಗಲ್, ತುಮಕೂರು ಜಿಲ್ಲೆ,
4. ಅರಕಲಗೂಡು ಟೌನ್, ಹಾಸನ ಜಿಲ್ಲೆ.
5. ಹಲಗನಹಳ್ಳಿ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ.
6. ಮುಳಬಾಗಿಲು, ಕೋಲಾರ ಜಿಲ್ಲೆ.
7. ಚನ್ನಪಟ್ಟಣ, ಬೆಂಗಳೂರು ಗ್ರಾಮಾಂತರ.

ಈ ವಸತಿ ಶಾಲೆಗಳಿಗೆ ಬೇಕಾದ ಸಿಬ್ಬಂದಿಗಳ ಮತ್ತು ಇತರೆ ಆವರ್ತಕ ಮತ್ತು ಅನಾವರ್ತಕ ವೆಚ್ಚಗಳ ಕುರಿತು ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಂ. ಬಾಟೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1341

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ತೋಟಗಾರಿಕಾ ಇಲಾಖೆಗೆ ಪ್ರತ್ಯೇಕ ಸಮನ್ವಯ ಸ್ವೀಕೃತಿ ಮತ್ತು ರವಾನೆ ಶಾಖೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 52 ಸಸಿವಿ 2006, ದಿನಾಂಕ: 4.4.2007.
2) ಅ.ಟಿ.ಸಂಖ್ಯೆ: ಕೃತೋಇ 211 ತೋಇವಿ 2006 (ಭಾ) ದಿನಾಂಕ: 4.5.2007.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 4.4.2007ರ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಸ್ವತಂತ್ರ ತೋಟಗಾರಿಕಾ ಇಲಾಖೆಯನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರ ಅನಧಿಕೃತ ಟಿಪ್ಪಣಿ ದಿನಾಂಕ: 4.5.2007 ರಲ್ಲಿ ತೋಟಗಾರಿಕಾ ಇಲಾಖೆಗೆ ಸಂಬಂಧಿಸಿದ ಇಲಾಖೆಯ ಕಾರ್ಯಗಳನ್ನು ನಿರ್ವಹಿಸಲು ಸಚಿವಾಲಯ ಕೈಪಿಡಿಯಲ್ಲಿ ರೂಪಿಸಿರುವ ನಿಯಮಗಳನ್ವಯ ಒಂದು ಪ್ರತ್ಯೇಕ ಸಮನ್ವಯ ಹಾಗೂ ಸ್ವೀಕೃತಿ ಮತ್ತು ರವಾನೆ ಶಾಖೆಯನ್ನು ಅಗತ್ಯ ಸಿಬ್ಬಂದಿಯೊಂದಿಗೆ ಸೃಜಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 32 ಸಸಿವಿ 2007, ಬೆಂಗಳೂರು, ದಿನಾಂಕ: 12ನೇ ಜುಲೈ 2007**

ಕರ್ನಾಟಕ ಸರ್ಕಾರ ಸಚಿವಾಲಯದ ತೋಟಗಾರಿಕಾ ಇಲಾಖೆಯಲ್ಲಿ ಒಂದು ಸ್ವೀಕೃತಿ ಮತ್ತು ರವಾನೆ ಶಾಖೆಯನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ಸೃಜಿಸಲಾಗಿದೆ ಹಾಗೂ ಈ ಹುದ್ದೆಗಳನ್ನು ರೀ–ಡಿಪ್ಲಾಯ್‌ಮೆಂಟ್ ಮೂಲಕ ಭರ್ತಿ ಮಾಡಲು ಆದೇಶಿಸಲಾಗಿದೆ.

| | | |
|---|---|---|
| 1 | ಶಾಖಾಧಿಕಾರಿ | 01 ಹುದ್ದೆ |
| 2 | ಸಹಾಯಕ | 01 ಹುದ್ದೆ |
| 3 | ಕಿರಿಯ ಸಹಾಯಕ | 02 ಹುದ್ದೆಗಳು |
| 4 | ಬೆರಳಚ್ಚುಗಾರ | 01 ಹುದ್ದೆ |
| 5 | ದಲಾಯತ್ | 02 ಹುದ್ದೆಗಳು |

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1035 ವೆಚ್ಚ–5/2007, ದಿನಾಂಕ: 13.6.2007 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

ಪಿ.ಆರ್. 1344

**ವಿಷಯ:** ಶ್ರೀ ಬಿ.ಡಿ.ಓಬಪ್ಪ, ಸರ್ಕಾರದ ಅಧೀನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ (ಕಾನೂನು ಕೋಶ) ಇವರ ವಿರುದ್ಧ ಇಲಾಖಾ ವಿಚಾರಣೆ–ಪ್ರಕರಣ ಮುಕ್ತಾಯಗೊಳಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ: ಸಿಆಸುಇ 41 ಎಸ್ಇಎನ್ 01 ದಿನಾಂಕ: 12.06.2006.
2) ಶ್ರೀ ಬಿ.ಡಿ.ಓಬಪ್ಪ ಅವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 30.08.2006.

**ಪ್ರಸ್ತಾವನೆ:**

ಶ್ರೀ ಬಿ.ಡಿ.ಓಬಪ್ಪ, ಸರ್ಕಾರದ ಅಧೀನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರು ಈ ಹಿಂದೆ ದಿನಾಂಕ: 18.09.97 ರಿಂದ 24.07.2000 ರವರೆಗೆ ನಿಯೋಜನೆ ಮೇಲೆ ತುಮಕೂರು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಕೆಳಕಂಡ ಆರೋಪಗಳನ್ನು ಎಸಗಿರುವುದು ಮೇಲ್ನೋಟಕ್ಕೆ ನಿಜವೆಂದು ಕಂಡು ಬಂದ ಮೇರೆಗೆ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11, 11ಎ ಮೇರೆಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 12.06.2006 ರಂದು ಆರೋಪಣಾ ಪಟ್ಟಿಯನ್ನು ನೋಟೀಸ್ ಮೂಲಕ ಜಾರಿಗೊಳಿಸಿ ಪ್ರತಿ ರಕ್ಷಣಾ ಹೇಳಿಕೆ ನೀಡಲು ಅವಕಾಶ ಕಲ್ಪಿಸಲಾಗಿತ್ತು.

ಆರೋಪಗಳ ವಿವರ:–

1) ಶ್ರೀ ಲೋಕಾಂಬ ಸಾರ್ವಜನಿಕ ವಿದ್ಯಾರ್ಥಿ ನಿಲಯ, ಸಿ.ಬಿ. ಕ್ಷೇತ್ರ, ತುಮಕೂರು ಈ ವಿದ್ಯಾರ್ಥಿ ನಿಲಯಕ್ಕೆ 1998–99ನೇ ಸಾಲಿನಲ್ಲಿ ರೂ.76,626/– ಗಳ ಅನುದಾನವನ್ನು ಬಿಡುಗಡೆ ಮಾಡುವ ಮೂಲಕ ದಿನಾಂಕ: 02.04.94 ಸಂಖ್ಯೆ: ಎಸ್‌ಡಬ್ಲ್ಯೂಎಲ್ 44 ಎಸ್‌ಬಿಸಿ 84ರ ಸರ್ಕಾರದ ಆದೇಶವನ್ನು ಉಲ್ಲಂಘಿಸಿ, ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು.
2) ಅನುದಾನಿತ ವಿದ್ಯಾರ್ಥಿ ನಿಲಯಗಳ ನಿರ್ವಹಣೆಗೆ ಆಯವ್ಯಯದಲ್ಲಿ ಹಣಕಾಸಿನ ಲಭ್ಯತೆ ಇಲ್ಲದಿದ್ದಾಗ್ಯೂ ಭಾರತ ಸರ್ಕಾರದ ವಿದ್ಯಾರ್ಥಿ ವೇತನ ಮಂಜೂರಾತಿಗೆ ಬದಲಾಗಿ ಅನುದಾನಿತ ವಿದ್ಯಾರ್ಥಿ ನಿಲಯಗಳ ನಿರ್ವಹಣೆಗಾಗಿ

ರೂ.17.70 ಲಕ್ಷಗಳನ್ನು ಮರು ಹೊಂದಾಣಿಕೆ ಮೂಲಕ ವೆಚ್ಚ ಮಾಡಿ ಸರ್ಕಾರದ ಆದೇಶಗಳನ್ನು ಉಲ್ಲಂಘಿಸಿರುವುದು.

3) ಶ್ರೀ ಲೋಕಾಂಬ ಸಾರ್ವಜನಿಕ ವಿದ್ಯಾರ್ಥಿ ನಿಲಯ, ಸಿ.ಬಿ.ಕ್ಷೇತ್ರ, ತುಮಕೂರು ಈ ವಿದ್ಯಾರ್ಥಿ ನಿಲಯಕ್ಕಾಗಿ ಪ್ರತ್ಯೇಕ ಕಟ್ಟಡವಿಲ್ಲದೆ ಇದ್ದಾಗ್ಯೂ ಪ್ರೌಢ ಶಾಲೆಗೆ ಹೊಂದಿಕೊಂಡಂತಿರುವ ಒಂದು ಅಡಿಗೆ ಕೋಣೆ ಹಾಗೂ ಮಲಗುವ ಕೋಣೆಯಲ್ಲಿ ವಿದ್ಯಾರ್ಥಿ ನಿಲಯ ನಡೆದಿದ್ದು, ಕಲ್ಯಾಣಾಧಿಕಾರಿಯವರೇ ವರದಿ ಮಾಡಿದ್ದರೂ ಸಹ ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 44 ಎಸ್‌ಬಿಸಿ 84, ದಿನಾಂಕ: 02.04.94ರ ನಿಯಮ 3(ಎಫ್)(ಜಿ) ರಲ್ಲಿ ತಿಳಿಸಿರುವಂತೆ ಪ್ರತಿ ವಿದ್ಯಾರ್ಥಿಗೆ 30 ಚದರಡಿಗಳ ಸ್ಥಳಾವಕಾಶವಿಲ್ಲದಿದ್ದಾಗ್ಯೂ ಸದರಿ ವಿದ್ಯಾರ್ಥಿ ನಿಲಯಕ್ಕೆ 1998–99ನೇ ಸಾಲಿಗೆ ರೂ.76.626/– ಗಳನ್ನು ಮಂಜೂರು ಮಾಡಲು ತುಮಕೂರು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರಿಗೆ ಶಿಫಾರಸ್ಸು ಮಾಡುವ ಮೂಲಕ ದುರ್ನಡತೆ ಎಸಗಿರುವುದು.

ಆಪಾದಿತ ಅಧಿಕಾರಿಯವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 30.08.2006 ರಂದು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯಲ್ಲಿ ದಿನಾಂಕ: 02.04.94ರ ಸರ್ಕಾರದ ಆದೇಶದಲ್ಲಿ ನಿಗದಿಪಡಿಸಿರುವ ನಿಬಂಧನೆಗಳು ವಿದ್ಯಾರ್ಥಿ ನಿಲಯಗಳಿಗೆ ಮಾನ್ಯತೆ ನೀಡಲು ಸಂಬಂಧಿಸಿರುತ್ತದೆಂದೂ, ಈಗಾಗಲೇ ತೃಪ್ತಿಕರವಾಗಿ ನಡೆಯುತ್ತಿರುವ ವಿದ್ಯಾರ್ಥಿ ನಿಲಯಗಳಿಗೆ ಅನುದಾನ ಬಿಡುಗಡೆಗೆ ಸದರಿ ಆದೇಶವು ಸಂಬಂಧಿಸಿರುವುದಿಲ್ಲವೆಂದೂ, ಶ್ರೀ ಲೋಕಾಂಬ ಸಾರ್ವಜನಿಕ ವಿದ್ಯಾರ್ಥಿ ನಿಲಯವು ಸಿ.ಬಿ.ಕ್ಷೇತ್ರದಲ್ಲಿನ ಶ್ರೀ ನರಸಿಂಹಸ್ವಾಮಿ ದೇವಸ್ಥಾನದ ಟ್ರಸ್ಟ್ ಕಟ್ಟಡದಲ್ಲಿ ನಡೆಯುತ್ತಿದ್ದು, 1200 ಚದರಡಿ ಜಾಗದಲ್ಲಿ 26 ವಿದ್ಯಾರ್ಥಿಗಳಿಗೆ ಊಟ ಮತ್ತು ವಸತಿ ವ್ಯವಸ್ಥೆ ಕಲ್ಪಿಸಲಾಗಿದೆಯೆಂದೂ, ಇಲಾಖೆಯ ತನಿಖಾ ಸಹಾಯಕರೊಂದಿಗೆ ಸದರಿ ವಿದ್ಯಾರ್ಥಿ ನಿಲಯಕ್ಕೆ ಏಳು ದಿನಾಂಕಗಳಲ್ಲಿ ತಪಾಸಣೆ ನಡೆಸಿದ್ದು, ವಿದ್ಯಾರ್ಥಿ ನಿಲಯದಲ್ಲಿ 26 ವಿದ್ಯಾರ್ಥಿಗಳು ವಸತಿ ಪಡೆದಿರುವ ಬಗ್ಗೆ ಹಾಜರಿ ಪುಸ್ತಕದ ದಾಖಲೆ ಪ್ರತಿ ಹಾಗೂ ಅವರುಗಳ ಸಹಿ ಪಡೆದಿರುವ ಪಟ್ಟಿಯನ್ನು ಒದಗಿಸುತ್ತಾ, ತಮ್ಮ ಮೇಲೆ ಮಾಡಿರುವ ಆರೋಪಗಳನ್ನು ಅಲ್ಲಗಳೆದಿರುತ್ತಾರೆ. ಮುಂದುವರಿದು, ಮಾರ್ಚ್ 1999ರ ಸಾಲಿನವರೆಗೆ ಸದರಿ ವಿದ್ಯಾರ್ಥಿ ನಿಲಯವು ತೃಪ್ತಿಕರವಾಗಿ ನಿಯಮಗಳ ಚೌಕಟ್ಟಿನಲ್ಲಿ ವಿದ್ಯಾರ್ಥಿ ನಿಲಯವು ನಡೆಯುತ್ತಿದ್ದರಿಂದ ಆ ವರ್ಷಕ್ಕೆ ಸಂಬಂಧಪಟ್ಟಂತೆ ರೂ.76.626/– ಗಳ ಅನುದಾನವನ್ನು ಬಿಡುಗಡೆಗೆ ಶಿಫಾರಸ್ಸು ಮಾಡಿರುವುದಾಗಿಯೂ, ತದನಂತರದಲ್ಲಿ ವಿದ್ಯಾರ್ಥಿಗಳ ಸಂಖ್ಯೆಯು ಕಡಿಮೆ ಆಗಿದ್ದು, ಸದರಿ ವಿದ್ಯಾರ್ಥಿ ನಿಲಯವು ಸಮರ್ಪಕವಾಗಿ ನಿರ್ವಹಣೆ ಮಾಡದ ಕಾರಣ ಸರ್ಕಾರವು ತನ್ನ ಆದೇಶ ದಿನಾಂಕ: 08.12.99 ರಲ್ಲಿ ಮಾನ್ಯತೆಯನ್ನು ರದ್ದುಗೊಳಿಸಿರುವುದಾಗಿ ಹೇಳಿಕೆಯಲ್ಲಿ ತಿಳಿಸುತ್ತಾ, ಈ ಪ್ರಕರಣದಲ್ಲಿ ಕರ್ತವ್ಯಲೋಪ ಅಥವಾ ನಿಯಮ ಉಲ್ಲಂಘನೆ ಮಾಡಿರುವುದಿಲ್ಲವೆಂದು, ಆದ್ದರಿಂದ ಆರೋಪಗಳಿಂದ ದೋಷಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ಆರೋಪಿತರ ಹೇಳಿಕೆ ಹಾಗೂ ಇದಕ್ಕೆ ಸಂಬಂಧಿಸಿದ ಪೂರಕ ದಾಖಲೆಗಳನ್ನು ಸರ್ಕಾರವು ಪರಿಶೀಲಿಸಿದೆ. 1998–99ನೇ ಸಾಲಿನ ಮಾರ್ಚ್ ಅಂತ್ಯಕ್ಕೆ ಯೋಜನೇತರ ಬಾಬ್ತಿನಲ್ಲಿ ಬಿಡುಗಡೆ ಮಾಡಲಾಗಿರುವ ಮೊತ್ತದಲ್ಲಿ, ರೂ.17.70 ಲಕ್ಷಗಳನ್ನು ಖಾಸಗಿ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳಿಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಯೋಜನಾ ವೆಚ್ಚಕ್ಕಾಗಿ ಖರ್ಚು ಮಾಡಲು ತುಮಕೂರು ಜಿಲ್ಲಾ ಪಂಚಾಯತ್‌ನ ಯೋಜನಾ ಹಣಕಾಸು, ಲೆಕ್ಕಪರಿಶೋಧನೆಯ ಸ್ಥಾಯಿ ಸಮಿತಿಯ ಸಭೆಯಲ್ಲಿ ಸರ್ವಾನುಮತದಿಂದ ತೀರ್ಮಾನಿಸಿ, ಸದರಿ ಹಣವನ್ನು ಬಡ ಮತ್ತು ಪರಿಶಿಷ್ಟ ಜಾತಿ/ವರ್ಗದ ಮಕ್ಕಳ ವಿದ್ಯಾಭ್ಯಾಸದ ದೃಷ್ಟಿಯಿಂದ ಬಿಡುಗಡೆ ಮಾಡಿರುವುದಕ್ಕೆ ಸರ್ಕಾರದ ಘಟನೋತ್ತರ ಅನುಮೋದನೆ ಪಡೆಯಲು ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿರುವುದು ಕಂಡು ಬರುತ್ತದೆ. ಆದರೆ, ಈ ಎಲ್ಲಾ ನಿಯಮ ರೀತ್ಯಾ ಅವಶ್ಯವಿರುವ ವಿಧಿವಿಧಾನಗಳನ್ನು ಅನುಸರಿಸದೇ ಮತ್ತು ತತ್ಸಂಬಂಧ ಮುಖ್ಯ ಲೆಕ್ಕಾಧಿಕಾರಿಯವರಿಗೆ ಅಥವಾ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಣಾ ಅಧಿಕಾರಿಯವರಿಗೆ ಆಪಾದಿತರು ತಿಳಿಸಬಹುದಾಗಿದ್ದರೂ ಸಹ ಈ ನಿಟ್ಟಿನಲ್ಲಿ ಯಾವುದೇ ಕ್ರಮ ಕೈಗೊಳ್ಳದೇ ಇರುವುದು ಇವರ ಕರ್ತವ್ಯಲೋಪವಾಗಿರುತ್ತದೆ. ಆದಾಗ್ಯೂ ಇವರ ಈ ಕ್ರಮಕ್ಕೆ ತದನಂತರ ಘಟನೋತ್ತರ ಅನುಮೋದನೆಯಾಗಿರುವುದನ್ನು ಸರ್ಕಾರವು ಮನಗಂಡು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಎಸ್‌ಇಎನ್ 2001, ಬೆಂಗಳೂರು, ದಿನಾಂಕ: 18ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ಬಿ.ಡಿ.ಓಬಪ್ಪ, ಸರ್ಕಾರದ ಅಧೀನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ (ಕಾನೂನು ಕೋಶ) ಅವರನ್ನು ಪ್ರಸ್ತಾವನೆಯಲ್ಲಿ ತಿಳಿಸಲಾದ ಆರೋಪಗಳಿಂದ ಮುಕ್ತರನ್ನಾಗಿಸಿ ಆದೇಶಿಸುತ್ತದೆ ಹಾಗೂ ಸದರಿಯವರು ಇನ್ನು ಮುಂದೆ ಜಾಗರೂಕತೆಯಿಂದ ಕಾರ್ಯನಿರ್ವಹಿಸುವಂತೆ ಎಚ್ಚರಿಕೆ ನೀಡುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ಬಿ.ಡಿ.ಓಬಪ್ಪ ರವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಂ. ವಾಸುದೇವಮೂರ್ತಿ

ಪಿ.ಆರ್. 1345

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ರಾಜ್ಯದ ಜಿಲ್ಲಾ ಸಾರ್ವಜನಿಕ ಆಸ್ಪತ್ರೆಗಳಲ್ಲಿ ಕೇಂದ್ರ ಸರ್ಕಾರವು ಮಂಜೂರು ಮಾಡಿರುವ ಆಯುಷ್ ವಿಭಾಗಗಳಿಗೆ ಅವಶ್ಯವಾದ ಹುದ್ದೆಗಳನ್ನು ಸೃಷ್ಟಿಸುವ ಬಗ್ಗೆ.

**ಓದಲಾಗಿದೆ:** 1) ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಆಯುಷ್/60/ಬಿಯುಡಿ(2)/2006–07, ದಿನಾಂಕ: 30.03.2007.

2) ದಿನಾಂಕ: 16.04.2007 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿ.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ, ಭಾರತ ಸರ್ಕಾರವು ರಾಜ್ಯದ ಜಿಲ್ಲಾ ಸಾರ್ವಜನಿಕ ಆಸ್ಪತ್ರೆಗಳಲ್ಲಿ ಆಯುಷ್ ವಿಭಾಗಗಳನ್ನು ತೆರೆಯಲು ಅನುದಾನ ಬಿಡುಗಡೆ ಮಾಡಿದ್ದು, ಅದು ಈಗಾಗಲೇ ರಾಜ್ಯ ಸರ್ಕಾರಕ್ಕೆ ಹೊಂದಾಣಿಕೆಯಾಗಿದೆ. ಭಾರತ ಸರ್ಕಾರದ ಮಾರ್ಗಸೂಚಿಯನ್ವಯ ಅನುದಾನವನ್ನು ವೇತನೇತರ ವೆಚ್ಚಗಳಿಗೆ ಮಾತ್ರ ಭಾರತ ಸರ್ಕಾರವು ಬಿಡುಗಡೆ ಮಾಡುತ್ತದೆ. ಉಳಿದಂತೆ ಈ ಘಟಕಗಳನ್ನು ಪ್ರಾರಂಭ ಮಾಡಲು ಅವಶ್ಯ ಹುದ್ದೆಗಳನ್ನು ಸೃಜಿಸಲು ಹಾಗೂ ಅದರ ವೆಚ್ಚವನ್ನು ರಾಜ್ಯ ಸರ್ಕಾರಗಳೇ ಭರಿಸಬೇಕಾಗಿದ್ದು, ಇದೊಂದು ವಿಶೇಷ ಯೋಜನೆಯಾಗಿದ್ದು ಔಷಧ ವೆಚ್ಚವನ್ನು ಭಾರತ ಸರ್ಕಾರವೇ ಮುಂದಿನ 5 ವರ್ಷದವರೆಗೆ ಭರಿಸುತ್ತದೆ. ಕೇಂದ್ರ ಪುರಸ್ಕೃತ ಯೋಜನೆಯ ಸಂಪೂರ್ಣ ಸದುಪಯೋಗವನ್ನು ಬಳಸಿಕೊಂಡು ಸಾರ್ವಜನಿಕರಿಗೆ ಉತ್ತಮ ಸೇವೆ ಒದಗಿಸಲು ಅನುಕೂಲವಾಗಲು 2007–08ರ ಆಯವ್ಯಯದ ಮೊದಲನೇ ಕಂತಿನ ಪೂರಕ ಅನುದಾನದಲ್ಲಿ ಲೆಕ್ಕ ಶೀರ್ಷಿಕೆ 2210–05–200–0–11 ಯೋಜನೆ ಜಿಲ್ಲಾ ಹಾಗೂ ಖಾಸಗಿ ಆಸ್ಪತ್ರೆಗಳಲ್ಲಿ ಭಾರತೀಯ ವೈದ್ಯ ಪದ್ಧತಿಯ ಘಟಕಗಳನ್ನು ತೆರೆಯುವುದು ಅಡಿಯಲ್ಲಿ ವೇತನಗಳಿಗೆ ರೂ.215.00 ಲಕ್ಷಗಳನ್ನು ಒದಗಿಸುವಂತೆ ಹಾಗೂ ಒಟ್ಟು 315 ಹುದ್ದೆಗಳನ್ನು ಸಂಬಂಧಿಸಿದ ವೇತನ ಶ್ರೇಣಿಗಳಲ್ಲಿ ಸೃಜಿಸಿ, ಜಿಲ್ಲಾ ಆಸ್ಪತ್ರೆಗಳಲ್ಲಿ ಹಾಗೂ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಆಯುಷ್ ವಿಭಾಗಗಳನ್ನು ತೆರೆಯಲು ಮಂಜೂರು ಮಾಡಿರುವ ಘಟಕಗಳನ್ನು ಪ್ರಾರಂಭಿಸಲು ಸರ್ಕಾರದ ಮಂಜೂರಾತಿಯನ್ನು ಕೋರಿದ್ದಾರೆ. ಹಾಗೂ ಪ್ರಸ್ತುತ ಈ ಹುದ್ದೆಗಳನ್ನು ಸಾಧ್ಯವಾದಷ್ಟು ಗುತ್ತಿಗೆ ಆಧಾರದ ಮೇಲೆ ಅಥವಾ ರೀ–ಡಿಪ್ಲಾಯ್‌ಮೆಂಟ್ ಮೂಲಕ ಭರ್ತಿ ಮಾಡಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 72 ಪಿಐಎಂ 2007, ಬೆಂಗಳೂರು, ದಿನಾಂಕ: 19ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಪ್ರಥಮ ಹಂತವಾಗಿ ರಾಜ್ಯ ಯೋಜನೆಯ ಅಡಿಯ ರೂ.350.00 ಲಕ್ಷಗಳ (ಮೂರು ನೂರ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಆಯವ್ಯಯದಲ್ಲಿ ಕನಿಷ್ಠ ರೂ.60.00 ಲಕ್ಷಗಳನ್ನು (ಅರವತ್ತು ಲಕ್ಷ ರೂಪಾಯಿಗಳು ಮಾತ್ರ) ಇಲಾಖೆಯ ಬೇರೆ ಶೀರ್ಷಿಕೆಗಳಿಂದ ಒದಗಿಸುವ ನಿಬಂಧನೆಗೆ ಒಳಪಟ್ಟು, ಭಾರತ ಸರ್ಕಾರವು ರಾಜ್ಯದ ಜಿಲ್ಲಾ ಆಸ್ಪತ್ರೆಗಳಲ್ಲಿ ಹಾಗೂ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಆಯುಷ್ ವಿಭಾಗಗಳನ್ನು ತೆರೆಯಲು ಮಂಜೂರು ಮಾಡಿರುವ ಕೇಂದ್ರಗಳಿಗೆ ವೈದ್ಯರ ಹಾಗೂ ಇತರೆ ಅವಶ್ಯ ಸಿಬ್ಬಂದಿ ಒಟ್ಟು 142 ಹುದ್ದೆಗಳನ್ನು ಇದರೊಂದಿಗೆ ಲಗತ್ತಿಸಿರುವ ಅನುಬಂಧ–I & II ರಲ್ಲಿರುವಂತೆ ಸೃಜಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2210–05–200–0–11 ಯೋಜನೆಡಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 16.04.2007 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ).

### ಅನುಬಂಧ–I

**1. ಸ್ಕೀಂ–I ಜಿಲ್ಲಾ ಆಸ್ಪತ್ರೆಗಳಲ್ಲಿ ಆಯುಷ್ ಒಳ ಮತ್ತು ಹೊರ ರೋಗಿ ವಿಭಾಗಗಳನ್ನು ಪ್ರಾರಂಭಿಸುವುದು (ಆಯುರ್ವೇದದ ಪಂಚಕರ್ಮ / ಕ್ಷಾರಸೂತ್ರ ವಿಭಾಗಗಳು)**

| ಕ್ರ. ಸಂ. | ಜಿಲ್ಲಾ ಆಸ್ಪತ್ರೆಗಳು | ಪ್ರತಿ ಜಿಲ್ಲೆಗೆ ಮಂಜೂರಾದ ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ (ರೂ.ಗಳಲ್ಲಿ) | ನೇಮಕಾತಿ ವಿಧಾನ |
|---|---|---|---|---|---|
| 1 | ಶಿವಮೊಗ್ಗ | ವೈದ್ಯರು ದರ್ಜೆ–I | 1 | 14050–25050 | ವೃಂದ ಮತ್ತು ನೇಮಕಾತಿಯ ನಿಯಮದಂತೆ ವೈದ್ಯರು ದರ್ಜೆ–2 ವೃಂದರಿಂದ ಪದೋನ್ನತಿಯ ಮೂಲಕ. |
| 2 | ಬೆಳಗಾಂ | | | | |
| 3 | ಉಡುಪಿ | | | | |
| 4 | ಗುಲ್ಬರ್ಗಾ | | | | |

| ಕ್ರ. ಸಂ. | ಜಿಲ್ಲಾ ಆಸ್ಪತ್ರೆಗಳು | ಪ್ರತಿ ಜಿಲ್ಲೆಗೆ ಮಂಜೂರಾದ ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ (ರೂ.ಗಳಲ್ಲಿ) | ನೇಮಕಾತಿ ವಿಧಾನ |
|---|---|---|---|---|---|
| 5 | ಧಾರವಾಡ | ಪ್ಯಾರಾಮೆಡಿಕಲ್ (ಫಾರ್ಮಾಸಿಸ್ಟ್) | 1 | 8825–16000 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಿಂದ ನಿಯೋಜನೆಯ ಮೂಲಕ |
| 6 | ದಾವಣಗೆರೆ | ಮಲ್ಟಿ ಪರ್ಪಸ್ ವರ್ಕರ್ಸ್ (ಗ್ರೂಪ್–ಡಿ) (ಒಟ್ಟು 12 ವಿಭಾಗಗಳಿಗೆ 36 ಹುದ್ದೆಗಳು) | 1 | 4800–7275 | ಹೊರ ಗುತ್ತಿಗೆ ಆಧಾರದ ಮೇಲೆ ನೇಮಕ. ಹೆಚ್ಚುವರಿಯಾಗಿ ಪ್ರತಿ ವಿಭಾಗದಲ್ಲಿ ಮಹಿಳಾ ಮಲ್ಟಿ ಪರ್ಪಸ್ ವರ್ಕರ್ಸ್ ಹುದ್ದೆಯನ್ನು ರೀ–ಡಿಪ್ಲಾಯ್‌ಮೆಂಟ್ ಮೂಲಕ ನೇಮಕ ಮಾಡುವುದು. |
| 7 | ರಾಯಚೂರು | | | | |
| 8 | ಹಾಸನ | | | | |
| 9 | ಕೋಲಾರ | | | | |
| 10 | ಚಿತ್ರದುರ್ಗ | | | | |
| 11 | ಚಿಕ್ಕಮಗಳೂರು | | | | |
| 12 | ಹಾವೇರಿ | | | | |

ಎನ್. ಮಹಾಲಕ್ಷ್ಮಮ್ಮ
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಅನುಬಂಧ–II

### 2. ಸ್ಕೀಂ–II ಆಯುಷ್ ಸ್ಪೆಷಾಲಿಟಿ ಹೊರ ರೋಗಿ ಕ್ಲಿನಿಕ್‌ಗಳನ್ನು ಪ್ರಾರಂಭಿಸುವುದು
### (ಜಿಲ್ಲಾ ಆಸ್ಪತ್ರೆಯ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಆಯುರ್ವೇದ / ಯುನಾನಿ / ಹೋಮಿಯೋಪತಿ)

| ಕ್ರ. ಸಂ. | ಅ. ಜಿಲ್ಲಾ ಆಸ್ಪತ್ರೆಗಳು | ವಿಭಾಗಗಳು | | | ಪ್ರತಿ ವಿಭಾಗಕ್ಕೆ ಮಂಜೂರಾದ ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ (ರೂ.ಗಳಲ್ಲಿ) | ನೇಮಕಾತಿ ವಿಧಾನ |
|---|---|---|---|---|---|---|---|---|
| | | ಯು | ಹೋ | ಪ್ರಚಿ | | | | |
| 1 | ಉಡುಪಿ | 1 | 1 | – | ವೈದ್ಯರು ದರ್ಜೆ–2 | 1 | 11400–21600 | ಕರ್ನಾಟಕ ಲೋಕಸೇವಾ ಆಯೋಗದಿಂದ ನೇರ ನೇಮಕಾತಿ ಮೂಲಕ ಭರ್ತಿ ಮಾಡುವುದು. ಹಾಗೂ ಸದರಿ ವೈದ್ಯರು ದರ್ಜೆ–2 ಹುದ್ದೆಗಳನ್ನು ನೇರ ನೇಮಕಾತಿಯ ಮೂಲಕ ಭರ್ತಿ ಮಾಡುವವರೆಗೆ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳುವುದು. |
| 2 | ಧಾರವಾಡ | 1 | 1 | 1 | | | | |
| 3 | ಗುಲ್ಬರ್ಗಾ | – | – | 1 | | | | |
| 4 | ದಾವಣಗೆರೆ | 1 | 1 | 1 | | | | |
| 5 | ರಾಯಚೂರು | – | 1 | 1 | | | | |
| 6 | ಕೋಲಾರ | 1 | 1 | – | | | | |
| 7 | ಚಿತ್ರದುರ್ಗ | 1 | 1 | 1 | | | | |
| 8 | ಚಿಕ್ಕಮಗಳೂರು | 1 | 1 | 1 | | | | |
| 9 | ತುಮಕೂರು | 1 | 1 | – | ಮಲ್ಟಿ ಪರ್ಪಸ್ ವರ್ಕರ್ಸ್ (ಗ್ರೂಪ್–ಡಿ) (ಒಟ್ಟು 53 ವಿಭಾಗಗಳಿಗೆ 106 ಹುದ್ದೆಗಳು) | 1 | 4800–7275 | ಹೊರ ಗುತ್ತಿಗೆ ಆಧಾರದ ಮೇಲೆ ನೇಮಕ. |
| 10 | ಮಂಗಳೂರು | 1 | – | 1 | | | | |
| 11 | ಮಡಿಕೇರಿ | 1 | 1 | 1 | | | | |
| 12 | ಚಾಮರಾಜನಗರ | 1 | 1 | 1 | | | | |
| 13 | ಬಿಜಾಪುರ | – | – | 1 | | | | |
| 14 | ಕಾರವಾರ | 1 | 1 | 1 | | | | |
| 15 | ಗದಗ | 1 | 1 | 1 | | | | |
| 16 | ಬೀದರ್ | – | 1 | 1 | | | | |
| 17 | ಕೊಪ್ಪಳ | 1 | 1 | 1 | | | | |
| 18 | ಬಳ್ಳಾರಿ | – | – | 1 | | | | |
| 19 | ಹಾವೇರಿ | 1 | 1 | 1 | | | | |
| 20 | ಬಾಗಲಕೋಟೆ | 1 | 1 | 1 | | | | |
| | ಒಟ್ಟು ಅ. | 15 | 16 | 17 | | | | |
| | ಆ. ಪ್ರಾಆ ಕೇಂದ್ರ | | | | | | | |
| 1 | ಹಾವೇರಿ | – | – | – | | | | |
| 2 | ಶಿಲವಳ್ಳಿ | – | 1 | – | | | | |

| ಕ್ರ. ಸಂ. | ಅ. ಜಿಲ್ಲಾ ಆಸ್ಪತ್ರೆಗಳು | ವಿಭಾಗಗಳು ಯು | ಹೋ | ಪ್ರಚಿ | ಪ್ರತಿ ವಿಭಾಗಕ್ಕೆ ಮಂಜೂರಾದ ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ (ರೂ.ಗಳಲ್ಲಿ) | ನೇಮಕಾತಿ ವಿಧಾನ |
|---|---|---|---|---|---|---|---|---|
| 3 | ಕೊಡ | – | 1 | – | | | | |
| 4 | ಬ್ಯಾಡಗಿ | – | 1 | – | | | | |
| 5 | ಕುಪ್ಪಲೂರ | 1 | – | – | | | | |
| 6 | ಹತ್ತಿಮಥುರ | 1 | – | – | | | | |
| | **ಒಟ್ಟು ಆ** | 2 | 3 | – | | | | |
| | **ಒಟ್ಟು ಅ+ಆ** | 17 | 19 | 17 | | | | |

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ.ಆರ್. 1347

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಟಿ.ಆರ್.ಜಯರಾಮೇಗೌಡ, ವ್ಯವಸ್ಥಾಪಕರು (ಕೈಗಾರಿಕಾ ಭಾಂದವ್ಯ) ಮೈಸೂರು ಪೇಪರ್ ಮಿಲ್ಸ್, ಭದ್ರಾವತಿ ಇವರನ್ನು ಮುಖ್ಯ ಮಂತ್ರಿಯವರ ಸಂಸದೀಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಯನ್ನಾಗಿ ಗುತ್ತಿಗೆ ಆಧಾರದ ಮೇರೆಗೆ ನೇಮಕಾತಿ – ಷರತ್ತು ಹಾಗೂ ನಿಬಂಧನೆಗಳ ಬಗ್ಗೆ ಆದೇಶ.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ: ಸಿಆಸುಇ 101 ಸಅಸೇ 2007, ದಿ: 16.4.07.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 16.4.2007ರ ಅಧಿಸೂಚನೆಯಲ್ಲಿ ಶ್ರೀ ಟಿ.ಆರ್. ಜಯರಾಮೇಗೌಡ, ವ್ಯವಸ್ಥಾಪಕರು, (ಕೈಗಾರಿಕಾ ಭಾಂದವ್ಯ) ಮೈಸೂರು ಪೇಪರ್ ಮಿಲ್ಸ್, ಭದ್ರಾವತಿ ಇವರನ್ನು ದಿನಾಂಕ: 15.2.2007 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ನಿಯಮ 15 (i) (iii) ರನ್ವಯ ಮಾನ್ಯ ಮುಖ್ಯ ಮಂತ್ರಿಯವರ ಸಂಸದೀಯ ಕಾರ್ಯದರ್ಶಿಯವರಾದ ಶ್ರೀ ಎನ್.ಸೂರ್ಯನಾರಾಯಣರೆಡ್ಡಿ ಇವರ ಆಪ್ತ ಕಾರ್ಯದರ್ಶಿಯನ್ನಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ. ಅಧಿಕಾರಿಯವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ನಿಗದಿಪಡಿಸುವ ಅಗತ್ಯತೆಯನ್ನು ಮನಗಂಡು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 101 ಸಅಸೇ 2007, ಬೆಂಗಳೂರು, ದಿನಾಂಕ: 10ನೇ ಜುಲೈ 2007**

ಮಾನ್ಯ ಮುಖ್ಯಮಂತ್ರಿಯವರ ಸಂಸದೀಯ ಕಾರ್ಯದರ್ಶಿಯವರಾದ ಶ್ರೀ ಎನ್. ಸೂರ್ಯನಾರಾಯಣರೆಡ್ಡಿ ಇವರ ಆಪ್ತ ಕಾರ್ಯದರ್ಶಿಯನ್ನಾಗಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ನಿಯಮ 15 (i) (iii) ರನ್ವಯ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿರುವ ಶ್ರೀ ಟಿ.ಆರ್.ಜಯರಾಮೇಗೌಡ ರವರ ಗುತ್ತಿಗೆ ಆಧಾರದ ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳನ್ನು ಈ ಆದೇಶದ ಅನುಬಂಧದಲ್ಲಿರುವಂತೆ ನಿಗದಿಪಡಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1203 ವೆಚ್ಚ–5/2007, ದಿನಾಂಕ: 29.6.2007 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

## Annexure to Government Order No.DPAR 101 SGO 2007 dated: 10.07.2007

Sri T.R.Jayaramegowda is appointed on contract basis on the following terms and conditions: -

1. PERIOD:

The period of contract of Shri T.R.Jayaramegowda, Manager [Indl.Relations] Mysore Paper Mills Bhadravati is for the period to be co-terminus with the office of the Parliamentary Secretary to Chief Minister (Shri N.Suryanarayanareddy) or so long as the service of Shri T.R.Jayaramegowda are required in the said office, whichever is earlier.

2. COMMENCEMENT AND END OF CONTRACT:

The contract shall commence on the date on which the official takes charge of the post under the Government and ends on the date on which he hands over charge of the post under the Government.

3. PAY & OTHER ALLOWANCES:

During the period of contract, Shri T.R.Jayaramegowda shall be entitled to pay including DA/HRA/CCA admissible to him in his Parent Organisation. He shall be entitled to special pay admissible to the post in the said establishment. However he shall not be entitled to any other deputation or foreign service allowance. He will also not be eligible for special allowances like lunch allowance /overtime allowance / bonus / Ex-gratia etc., attached to the post or attached to the parent organization.

4. LEAVE RULES:

He will be governed by the Leave Rules applicable to him in his parent organisation.

5. LEAVE SALARY CONTRIBUTION:

The Government shall pay Leave Salary contribution at the rate of 10% of Pay

6. P.F.CONTRIBUTIONS:

12% of basic pay plus D.A. shall be deducted from salary of the employee every month and remitted to Mysore Paper Mills Ltd.,

7. GRATUITY FUND CONTRIBUTION:

Government shall pay contribution towards service gratuity at the rate of 5% of (Basic + S.P +DA)

8. MEDICAL CONCESSION:

The official shall be entitled to the medical attendance as per the Karnataka Government Servants (Medical Attendance) Rules 1963.

9. He shall perform the functions of Private Secretary and attend to all work entrusted to him from time to time by the said establishment

10. He shall perform his duties diligently and he shall maintain strict secrecy in respect of official information which he comes to know in the course of his duties.

11. He shall be liable to reimburse to Government all the losses which the Government may sustain due to misconduct of any sort on his part.

**H.R. NAGENDRA**

P.R-1291 Under Secretary to Government, DPAR (Services-2).

**ವಿಷಯ:** ಶ್ರೀ ಎಸ್.ಸಿ.ಮಹದೇವ, ಮುಖ್ಯ ವ್ಯವಸ್ಥಾಪಕರು, ಮಾರ್ಕೆಟಿಂಗ್ (ಡಬ್ಲ್ಯೂ.ಎಸ್) ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಸಿ.ಆ.ಸು.ಇಲಾಖೆ (ಚುನಾವಣೆಗಳು) ವಿಭಾಗದ ವಿಶೇಷಾಧಿಕಾರಿ (ಆರ್ಥಿಕ) ಹುದ್ದೆಗೆ ಗುತ್ತಿಗೆ ಆಧಾರದ ಮೇರೆಗೆ ನೇಮಕಾತಿ – ಷರತ್ತು ಹಾಗೂ ನಿಬಂಧನೆಗಳ ಬಗ್ಗೆ ಆದೇಶ.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ: ಸಿಆಸುಇ 25 ಸಸಿವಿ 2007, ದಿ: 05.05.07.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 05.05.2007ರ ಅಧಿಸೂಚನೆಯಲ್ಲಿ ಶ್ರೀ ಎಸ್.ಸಿ.ಮಹದೇವ, ಮುಖ್ಯ ವ್ಯವಸ್ಥಾಪಕರು, ಮಾರ್ಕೆಟಿಂಗ್ (ಡಬ್ಲ್ಯೂ.ಎಸ್) ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಸಿ.ಆ.ಸು.ಇಲಾಖೆ (ಚುನಾವಣೆಗಳು) ವಿಭಾಗದ ವಿಶೇಷಾಧಿಕಾರಿ (ಆರ್ಥಿಕ) ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ನಿಯಮ 15 (i) (iii) ರನ್ವಯ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ. ಅಧಿಕಾರಿಯವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ನಿಗದಿಪಡಿಸುವ ಅಗತ್ಯತೆಯನ್ನು ಮನಗಂಡು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 222 ಸಅಸೇ 2007, ಬೆಂಗಳೂರು, ದಿನಾಂಕ: 10ನೇ ಜುಲೈ 2007**

ಶ್ರೀ ಎಸ್.ಸಿ.ಮಹದೇವ, ಮುಖ್ಯ ವ್ಯವಸ್ಥಾಪಕರು, ಮಾರ್ಕೆಟಿಂಗ್ (ಡಬ್ಲ್ಯೂ.ಎಸ್) ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರ ಕರ್ನಾಟಕ ಸರ್ಕಾರ ಸಚಿವಾಲಯದ ಸಿ.ಆ.ಸು.ಇಲಾಖೆ (ಚುನಾವಣೆಗಳು) ವಿಭಾಗದ

ವಿಶೇಷಾಧಿಕಾರಿ (ಆರ್ಥಿಕ) ಹುದ್ದೆಯ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ಈ ಆದೇಶದ ಅನುಬಂಧದಲ್ಲಿರುವಂತೆ ನಿಗದಿಪಡಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1167 ವೆಚ್ಚ–5/2007, ದಿನಾಂಕ: 21.5.2007 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**Annexure to Government Order No.DPAR 222 SGO 2007 dated: 10.7.2007**

Sri S.C.Mahadev, Chief Manager, Marketting (WS), The Karnataka Handloom Development Corporation Ltd., Bangalore is appointed on contract basis on the following terms and conditions: -

1. PERIOD:

The period of contract of Shri S.C.Mahadev, Chief Manager, Marketting (WS), The Karnataka Handloom Development Corporation Ltd., Bangalore, is for a period of two years from 10.5.2007 or until further orders whichever is earlier.

2. COMMENCEMENT AND END OF CONTRACT:

The contract shall commence on the date on which the official takes charge of the post under the Government and ends on the date on which he hands over charge of the post under the Government.

3. PAY & OTHER ALLOWANCES:

During the period of contract, Shri S.C.Mahadev shall be entitled to pay including DA/HRA/CCA admissible to him in his Parent Organisation. He shall be entitled to special pay admissible to the post in the said establishment. However he shall not be entitled to any other deputation or foreign service allowance. He will also not be eligible for special allowances like lunch allowance /overtime allowance / bonus / Ex-gratia etc., attached to the post or attached to the parent organization.

4. LEAVE RULES:

He will be governed by the Leave Rules applicable to him in his parent organisation.

5. LEAVE SALARY CONTRIBUTION:

The Government shall pay Leave Salary contribution at the rate of 10% of Pay

6. P.F.CONTRIBUTIONS:

12% of basic pay plus D.A. shall be deducted from salary of the employee every month and remitted to The Karnataka Handloom Development Corporation Ltd., Bangalore.

7. GRATUITY FUND CONTRIBUTION:

Government shall pay contribution towards service gratuity at the rate of 5% of (Basic + S.P +DA)

8. MEDICAL CONCESSION:

The official shall be entitled to the medical attendance as per the Karnataka Government Servants (Medical Attendance) Rules 1963.

9. He shall perform the functions of Special Officer (Finance) and attend to all work entrusted to him from time to time by the said establishment

10. He shall perform his duties diligently and he shall maintain strict secrecy in respect of official information which he comes to know in the course of his duties.

11. He shall be liable to reimburse to Government all the losses which the Government may sustain due to misconduct of any sort on his part.

12. In respect of matters not covered in the above terms and conditions, the decision of the Government shall be final.

**H.R. NAGENDRA**

P.R-1292

Under Secretary to Government, DPAR (Services-2).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಹಾಸನ ನಗರದ ಚನ್ನಪಟ್ಟಣ ಕೆರೆಯ ಮಧ್ಯೆ ಭಾಗದಲ್ಲಿ ರೂ.280.00 ಲಕ್ಷಗಳ ವೆಚ್ಚದಲ್ಲಿ ನಿರ್ಮಿಸಲು ಉದ್ದೇಶಿಸಿರುವ (ಹೈಲ್ಯಾಂಡ್ ಹೋಟೆಲಿನಿಂದ ಉತ್ತರ ಭಾಗದ ಏರಿಯವರೆಗೆ) ಸೇತುವೆ ನಿರ್ಮಾಣ ಕಾಮಗಾರಿಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವ ಬಗ್ಗೆ–ಆದೇಶ.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ ಇವರ ಪತ್ರ ಸಂಖ್ಯೆ: ಮುನಿಸಿ(1)ಸಿಆರ್/4/2007–08, ದಿನಾಂಕ: 15.05.2007.

2) ಸರ್ಕಾರದ ಆದೇಶ ಸಂಖ್ಯೆ: ನಅಇ 27 ಎಸ್‌ಎಫ್‌ಸಿ 2007(3), ದಿನಾಂಕ: 29.03.2007.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಹಾಸನ ನಗರದ ಚನ್ನಪಟ್ಟಣ ಕೆರೆ ಮಧ್ಯ ಭಾಗದಲ್ಲಿ ನಿರ್ಮಿಸಲು ಉದ್ದೇಶಿಸಿರುವ ಹೈಲ್ಯಾಂಡ್ ಹೋಟೆಲಿನಿಂದ ಉತ್ತರ ಭಾಗದ ಏರಿಯವರೆಗೆ ಸೇತುವೆ ನಿರ್ಮಾಣ ಕಾಮಗಾರಿಯ ಅಂದಾಜು ಮೊತ್ತ ರೂ.280.00 ಲಕ್ಷಗಳಿಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಈ ವೆಚ್ಚವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದ ಪ್ರಕಾರ ಬಿಡುಗಡೆಯಾಗಿರುವ ರೂ.10.00 ಕೋಟಿಗಳ ಅನುದಾನದಲ್ಲಿ ಭರಿಸಲಾಗುವುದೆಂದು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 189 ಜಿಇಎಲ್ 2007, ಬೆಂಗಳೂರು, ದಿನಾಂಕ: 13ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಹಾಸನ ನಗರದ ಚನ್ನಪಟ್ಟಣ ಕೆರೆ ಮಧ್ಯ ಭಾಗದಲ್ಲಿ ನಿರ್ಮಿಸಲು ಉದ್ದೇಶಿಸಿರುವ ಹೈಲ್ಯಾಂಡ್ ಹೋಟೆಲಿನಿಂದ ಉತ್ತರ ಭಾಗದ ಏರಿಯವರೆಗೆ ಸೇತುವೆ ನಿರ್ಮಾಣ ಕಾಮಗಾರಿಯ ರೂ.280.00 ಲಕ್ಷಗಳ (ಇನ್ನೂರ ಎಂಭತ್ತು ಲಕ್ಷ ರೂಪಾಯಿಗಳು ಮಾತ್ರ) ಅಂದಾಜು ವೆಚ್ಚದ ಪಟ್ಟಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

i) ಪ್ರಸ್ತುತ ಶೇಕಡ 80 ರಷ್ಟು ಕಾಮಗಾರಿಯನ್ನು ಕೈಗೆತ್ತಿಕೊಳ್ಳುವುದು.

ii) ಬಳಿಕ ಶೇಕಡ 20 ರಷ್ಟು ಕಾಮಗಾರಿಯನ್ನು ಆರ್ಥಿಕ ಇಲಾಖೆಯ ಹಣ ಬಿಡುಗಡೆ ಮಾಡಿದ ನಂತರ ಕೈಗೆತ್ತಿಕೊಳ್ಳುವುದು.

ಈ ವೆಚ್ಚವನ್ನು ಸರ್ಕಾರದ ಆದೇಶ ಸಂಖ್ಯೆ: ನಅಇ 23 ಎಸ್‌ಎಫ್‌ಸಿ 2007 ದಿನಾಂಕ: 05.06.2007 ರಲ್ಲಿ ಹಾಸನ ನಗರಸಭೆಗೆ ಬಿಡುಗಡೆ ಮಾಡಿರುವ 446.69 ಲಕ್ಷ ರೂ.ಗಳ ಅನುದಾನದಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 1348 ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ವಿಷಯ:** ಸಾರ್ವಜನಿಕರ ಅಗತ್ಯ ಸೇವೆಗಳ ನಿರ್ವಹಣೆಗಾಗಿ ತುರ್ತು ಕ್ರಮಗಳನ್ನು ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ನಿಯಮಗಳು 2000.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಪೌರಸೇವಾ ನೌಕರರುಗಳು ದಿನಾಂಕ: 16.07.2007 ರಿಂದ ಮುಷ್ಕರದಲ್ಲಿದ್ದು, ಮಹಾನಗರ ಪಾಲಿಕೆಗಳನ್ನು ಬಿಟ್ಟು ಹಲವಾರು ನಗರಸಭೆಗಳು, ಪುರಸಭೆಗಳು ಮತ್ತು ಪಟ್ಟಣ ಪಂಚಾಯತಿಗಳು ಹಾಗೂ ಅವುಗಳ ಸಿಬ್ಬಂದಿಗಳು ಕಾರ್ಯನಿರ್ವಹಿಸದೇ ಇರುವ ವಿಷಯವನ್ನು ಗಮನಿಸಿದ ಸರ್ಕಾರವು ದಿನಾಂಕ: 05.07.2007 ಹಾಗೂ ದಿನಾಂಕ: 06.07.2007 ರಂದು ಸದರಿ ಸಂಘದ ಪದಾಧಿಕಾರಿಗಳೊಂದಿಗೆ ಅವರ ಬೇಡಿಕೆಗಳನ್ನು ಕುರಿತು ಸಮಗ್ರವಾಗಿ ಚರ್ಚಿಸಲಾಗಿದ್ದು ದಿನಾಂಕ: 18.07.2007 ರಂದು ಮಾನ್ಯ ಪೌರಾಡಳಿತ ಸಚಿವರ ಅಧ್ಯಕ್ಷತೆಯಲ್ಲಿ ಸಂಘದ ಪದಾಧಿಕಾರಿಗಳ ಜೊತೆಗೆ ಚರ್ಚೆ ನಡೆಸಿ ಪೌರ ಸೇವಾ ನೌಕರರು ಮಂಡಿಸಿರುವ ಬೇಡಿಕೆಗಳ ಪೈಕಿ ಬಹುತೇಕ ಬೇಡಿಕೆಗಳನ್ನು ಈಗಾಗಲೇ ಸರ್ಕಾರವು ಕಾರ್ಯಗತಗೊಳಿಸಿದೆ. ದಿನಗೂಲಿ ನೌಕರರ ಖಾಯಮಾತಿ ಬಗ್ಗೆ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶದನುಸಾರ ಅರ್ಹರಿರುವ ಎಲ್ಲ ದಿನಗೂಲಿ ನೌಕರರನ್ನು ಖಾಯಂ ಮಾಡುವ ಪ್ರಕ್ರಿಯೆಯು ಜಾರಿಯಲ್ಲಿದ್ದು ಈಗಾಗಲೇ ಜಿಲ್ಲಾಧಿಕಾರಿಗಳ ಹಾಗೂ ಪೌರಾಡಳಿತ ನಿರ್ದೇಶನಾಲಯದ ಮಟ್ಟದಲ್ಲಿ ಒಟ್ಟು 1081 ದಿನಗೂಲಿ ನೌಕರರ ಸೇವೆಯನ್ನು ಕಾನೂನು ರೀತಿ ಸಕ್ರಮಗೊಳಿಸಿ ಆದೇಶಿಸಲಾಗಿದೆ.

ಇನ್ನುಳಿದ ಎಲ್ಲಾ ಪ್ರಕರಣಗಳನ್ನು ತ್ವರಿತವಾಗಿ ಇತ್ಯರ್ಥಗೊಳಿಸಲು ಸರ್ಕಾರವು ಸೂಚಿಸಿದೆ. ಹೀಗಿದ್ದಾಗ್ಯೂ, ಪೌರಸೇವಾ ನೌಕರರುಗಳನ್ನು ಸರ್ವೋಚ್ಚ ನ್ಯಾಯಾಲಯದ ಆದೇಶದ ಪ್ರಕಾರ ಅರ್ಹತೆ ಇಲ್ಲದ ದಿನಗೂಲಿ ನೌಕರರನ್ನೂ ಖಾಯಂಗೊಳಿಸಬೇಕೆಂಬ ಬೇಡಿಕೆ ತೀರ ಅಸಮಂಜಸ ಹಾಗೂ ಕಾನೂನು ಬಾಹಿರವಾಗಿರುತ್ತದೆ. ಎಲ್ಲಾ ದಿನಗೂಲಿ ನೌಕರರನ್ನು

**ಸರ್ಕಾರದ ಆದೇಶ ಸಂಖ್ಯೆ: ಒಇ 451 ಪೊಸಿಅ 2006, ಬೆಂಗಳೂರು, ದಿನಾಂಕ:18ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಕೆ. ಅಗಸರ, ಮಾಜಿ ಅನುಯಾಯಿ–43 (ದೋಬಿ) 8ನೇ ಪಡೆ, ಕೆಎಸ್‌ಆರ್‌ಪಿ., ಶಿವಮೊಗ್ಗ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:09.02.2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

1) ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಭಾಗಶಃ ಮಾರ್ಪಾಡಿಸಿ ಸೇವೆಯಿಂದ ವಜಾ ಮಾಡುವ ಬದಲಿಗೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದೆ.

2) ಉಳಿದಂತೆ ಶಿಸ್ತು ಪ್ರಾಧಿಕಾರಿ ಆದೇಶದಲ್ಲಿರುವಂತೆಯೇ ಮುಂದುವರಿಯುತ್ತದೆ.

3) ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 209 ಸಿಎನ್‌ಎಸ್ 2006, ದಿನಾಂಕ:21.03.2007ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಪಿ.ಆರ್.982

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಪುಟ್ಟಲಿಂಗಯ್ಯ, ಸಿ.ಪಿ.ಐ., ಶ್ರೀರಂಗಪಟ್ಟಣ ವೃತ್ತ, ಶ್ರೀ ಗುರುರಾಜ, ಪಿ.ಎಸ್.ಐ. ಶ್ರೀ ಶಿವಪ್ಪಾರಾಧ್ಯ, ಎ.ಎಸ್.ಐ., ಮತ್ತು ಭದ್ರಾಚಾರಿ, ಎ.ಎಸ್.ಐ. ಕೆ.ಆರ್.ಎಸ್. ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯ ನಂತರ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1) ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು ರವರ ಪತ್ರ ಸಂಖ್ಯೆ: ಅಪೀಲು (8)/15/ 2004–05 ದಿನಾಂಕ:08.06.2004 ಮತ್ತು 13.02.2007.

2) ಸರ್ಕಾರದ ಆದೇಶ ಸಂಖ್ಯೆ: ಒಇ 253 ಪೊಸಇ 2004 ದಿನಾಂಕ:04.06.2005

**ಪ್ರಸ್ತಾವನೆ:**

ಶ್ರೀ ಪುಟ್ಟಲಿಂಗಯ್ಯ, ಸಿ.ಪಿ.ಐ., ಶ್ರೀರಂಗಪಟ್ಟಣ ವೃತ್ತ, ಹಾಲಿ ರಾಜ್ಯ ಗುಪ್ತವಾರ್ತೆ, ಬೆಂಗಳೂರು, ಶ್ರೀ ಗುರುರಾಜ, ಪಿ.ಎಸ್.ಐ. ಶ್ರೀ ಶಿವಪ್ಪಾರಾಧ್ಯ, ಎ.ಎಸ್.ಐ. ಮತ್ತು ಭದ್ರಾಚಾರಿ, ಎ.ಎಸ್.ಐ., ಕೆ.ಆರ್.ಎಸ್. ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರುಗಳು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:01/02.11.2001ರ ಬೆಳಗಿನ ಜಾವ ರಾಮ ಅಲಿಯಾಸ್ ರಾಮೇಗೌಡ ಎಂಬುವನನ್ನು, ಮಂಡ್ಯ ಜಿಲ್ಲೆಯ, ಕೆ.ಆರ್.ಪೊಲೀಸ್ ಠಾಣೆಯ ಸರಹದ್ದಿನ ಬಲ್ಮೂರಿ ಕ್ಷೇತ್ರದ ರಾಮಚಂದ್ರ ರವರ ಅಂಗಡಿಗೆ ಕನ್ನ ಕೊರೆದು ಕಳವು ಮಾಡಲು ಪ್ರಯತ್ನಿಸುತ್ತಿರುವಾಗ ಸಾರ್ವಜನಿಕರು ಹಾಗೂ ಅಂಗಡಿ ಮಾಲೀಕರು ಸದರಿ ರಾಮನನ್ನು ಹಿಡಿದು ಮಾರನೇ ದಿನ ದಿನಾಂಕ 02.11.2001ರಂದು ಮುಂಜಾನೆ 08.30ರ ಸಮಯದಲ್ಲಿ ಕೆ.ಆರ್.ಎಸ್. ಪೊಲೀಸ್ ಠಾಣೆಗೆ ಒಪ್ಪಿಸಿದ್ದು, ಆತನ ಮೇಲೆ ಕಾನೂನು ರೀತ್ಯ ಕ್ರಮ ಜರುಗಿಸುವ ಬದಲಾದ ದಿನಾಂಕ:02.11.2001 ರಿಂದ 07.11.2001 ರವರೆಗೆ ಆತನನ್ನು ಕಳ್ಳತನ ಪ್ರಕರಣದಲ್ಲಿ ಒತ್ತಾಯ ಪೂರ್ವಕವಾಗಿ ಹೇಳಿಕೆ ಪಡೆಯಲು ಅನಧಿಕೃತವಾಗಿ ಅಕ್ರಮ ಬಂಧನದಲ್ಲಿಟ್ಟು ಕಾರಣರಾಗಿದ್ದು, ಇವರುಗಳ ವಿರುದ್ಧ ಕಲಂ 343 ರೆ.ವಿ. 34 ಐಪಿಸಿ ಪ್ರಕಾರ ಅಭಿಯೋಗಗೊಳಿಸಲು ಸರ್ಕಾರದ ಆದೇಶದ ಸಂಖ್ಯೆ: ಒಇ 132/ ಸಿಓಡಿ/ 2003 ದಿನಾಂಕ:25.11.2003ರ ಆದೇಶದಲ್ಲಿ ದಂಡಪ್ರಕ್ರಿಯೆ ಸಂಹಿತೆಯ ಕಲಂ 197 ಹಾಗೂ ಕರ್ನಾಟಕ ಪೊಲೀಸ್ ಕಾಯ್ದೆ ಕಲಂ 170ರ ಅಡಿಯಲ್ಲಿ ಪೂರ್ವಾನುಮತಿ ನೀಡಲಾಗಿರುತ್ತದೆ. ಸದರಿಯವರುಗಳ ವಿರುದ್ಧ ಕಲಂ 343 ರೆ.ವಿ.34 ಐಪಿಸಿ ಪ್ರಕರಣ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿದ್ದು, ಇದು ಮಾನ್ಯ ಎಂ.ಎಂ. ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಸಿಸಿ ಸಂಖ್ಯೆ: 773/2003 ರಲ್ಲಿ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುತ್ತದೆ. ಸದರಿಯವರುಗಳು ಕರ್ತವ್ಯದಲ್ಲಿ ನಿರ್ಲಕ್ಷತೆ ಕರ್ತವ್ಯ ಲೋಪ ಮತ್ತು ದುರ್ನಡತೆ ಎಸಗಿರುವುದು ಸಿ.ಓ.ಡಿ. ಬೆಂಗಳೂರು ರವರ ಉಲ್ಲೇಖಿತ (1)ರ ಪತ್ರದಿಂದ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸದರಿಯವರುಗಳನ್ನು ಉಲ್ಲೇಖಿತ (2)ರ ಆದೇಶದಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತಿನ ನಡವಳಿ) ನಿಯಮಗಳು 1965/ 89ರ ನಿಯಮ 6 ಉಪ ನಿಯಮ 2 ಮತ್ತು 8ರ ಪ್ರಕಾರ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಡಿಎಸ್‌ಪಿ (ಡಿಇ), ದಕ್ಷಿಣ ವಲಯ, ಮೈಸೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು ರವರು ಸಹ ಇದೇ ಆರೋಪದ ಮೇಲೆ ಶ್ರೀ ಭದ್ರಾಚಾರ್, ಎಎಸ್‌ಐ ಮತ್ತು ಶ್ರೀ ಆರ್. ಗುರುರಾಜ್, ಪಿಎಸ್‌ಐ ರವರುಗಳ ವಿರುದ್ಧ ಕೆ.ಎಸ್.ಪಿ. (ಡಿಪಿ) ನಿಯಮಾವಳಿ 1965ರ ನಿಯಮ 6ರ ಜೊತೆಗೆ 8 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಉಲ್ಲೇಖಿತ (3)ರಲ್ಲಿ ಆದೇಶಿಸಿ ಡಿ.ಎಸ್.ಪಿ. ನಂಜನಗೂಡು ಉಪ ವಿಭಾಗ, ಮೈಸೂರು ಜಿಲ್ಲೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುತ್ತಾರೆ.

ಶ್ರೀ ಶಿವಪ್ಪಾರಾಧ್ಯ, ಎಎಸ್ಐ ರವರು ದಿನಾಂಕ:31.03.2003 ರಂದು ವಯೋನಿವೃತ್ತಿ ಹೊಂದಿರುವುದರಿಂದ ಕೆ.ಸಿ.ಎಸ್.ಆರ್. ನಿಯಮ 214ರ ಪ್ರಕಾರ ಇಲಾಖಾ ವಿಚಾರಣೆಗೆ ಸರ್ಕಾರದಿಂದ ಆದೇಶಿಸಬೇಕಾಗಿರುತ್ತದೆ. ಆದ್ದರಿಂದ ಉಲ್ಲೇಖಿತ (2) ಮತ್ತು (3)ರ ಆದೇಶಗಳನ್ನು ರದ್ದುಪಡಿಸಿ, ಶ್ರೀ ಪುಟ್ಟಲಿಂಗಯ್ಯ, ಸಿ.ಪಿ.ಐ. ರಾಜ್ಯ ಗುಪ್ತವಾರ್ತೆ, ಬೆಂಗಳೂರು, ಶ್ರೀ ಗುರುರಾಜ್, ಪಿ.ಎಸ್.ಐ. ಕೆ.ಆರ್.ಎಸ್. ಪೊಲೀಸ್‌ಠಾಣೆ, ಶ್ರೀ ಶಿವಪ್ಪಾರಾಧ್ಯ, ನಿವೃತ್ತ ಎ.ಎಸ್.ಐ. ಮತ್ತು ಭದ್ರಾಚಾರಿ, ಎ.ಎಸ್.ಐ. ಕೆ.ಆರ್.ಎಸ್. ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ರವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಡಿಜಿ ಮತ್ತು ಐಜಿಪಿ, ಬೆಂಗಳೂರು ರವರು ಸರ್ಕಾರಕ್ಕೆ ಕೋರಿರುತ್ತಾರೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಆಪಾದಿತರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214ರನ್ವಯ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಡಿವೈ.ಎಸ್.ಪಿ. (ಇಲಾಖಾ ವಿಚಾರಣೆಗಳು) ದಕ್ಷಿಣ ವಲಯ, ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಓದಲಾದ ಉಲ್ಲೇಖ 2ರ ಆದೇಶದಲ್ಲಿ ನೇಮಿಸಿದೆ. ಡಿ.ಜಿ. ಮತ್ತು ಐಜಿಪಿ, ಬೆಂಗಳೂರು ರವರು ದಿನಾಂಕ:13.02.2007ರಂದು ವರದಿ ನೀಡಿದ್ದು, ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 253 ಪೊಸಇ 2004, ಬೆಂಗಳೂರು, ದಿನಾಂಕ:28ನೇ ಮೇ, 2007**

ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಗುರುರಾಜ, ಪಿ.ಎಸ್.ಐ. ಮತ್ತು ಶ್ರೀ ಭದ್ರಾಚಾರಿ, ಎ.ಎಸ್.ಐ. ರವರುಗಳಿಗೆ ಅವರ ವೇತನವನ್ನು ಕಾಲ ವೇತನ ಶ್ರೇಣಿಯಲ್ಲಿ ಕೆಳಗಿನ ಹಂತಕ್ಕೆ 2 ವರ್ಷಗಳ ಅವಧಿಗೆ ಇಳಿಸಿ ಆದೇಶಿಸಿದೆ. ಈ ಅವಧಿಗೆ ವೇತನ ಬಡ್ತಿ ಪಡೆಯಲು ಅವರುಗಳು ಅರ್ಹರಿರುವುದಿಲ್ಲ. ದಂಡನಾ ಅವಧಿ ಮುಕ್ತಾಯದ ನಂತರ ದಂಡನಾ ಅವಧಿಯ ಹಿಂದಿನ ದಿನ ಪಡೆಯುತ್ತಿದ್ದ ವೇತನಕ್ಕೆ ಅವರ ವೇತನ ನಿಗದಿಪಡಿಸಲು ಹಾಗೂ ಶ್ರೀ ಪುಟ್ಟಲಿಂಗಯ್ಯ, ಸಿ.ಪಿ.ಐ., ರವರು ನಿವೃತ್ತಿ ಹೊಂದಿರುವುದರಿಂದ ಅವರ ಪಿಂಚಣಿಯ ವಿಶ್ರಾಂತಿ ವೇತನದಲ್ಲಿ ತಿಂಗಳಿಗೆ ರೂ.200/– (ಇನ್ನೂರು ರೂಪಾಯಿ) ಗಳನ್ನು 2 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿದೆ. ಶ್ರೀ ಶಿವಪ್ಪಾರಾಧ್ಯ, ನಿವೃತ್ತ ಎ.ಎಸ್.ಐ. ರವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲದ ಕಾರಣ ಅವರನ್ನು ವಿಚಾರಣೆಯಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.983

## ಸಹಕಾರ ಸಚಿವಾಲಯ

**ವಿಷಯ:** ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಶ್ರೀನಿವಾಸಪುರ, ಇದರ 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಜರುಗಿಸಲು ಅನುಮತಿ ನೀಡುವ ಕುರಿತು.

**ಓದಲಾಗಿದೆ:** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ: ಡಿಎಸ್‌ಕೆ/ ಇಎಸ್‌ಟಿಎಸ್/ 98/ 2003–04, ದಿನಾಂಕ:16.03.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಶ್ರೀನಿವಾಸಪುರ ಇದರ 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಕಛೇರಿಯ ಆದೇಶ ಸಂಖ್ಯೆ: ಡಿಎಸ್‌ಕೆ ಇಎಸ್‌ಟಿಎಸ್ ಜೆಬಿಎಂ 98 2005–06 ದಿನಾಂಕ:13.09.2006ರಲ್ಲಿ 31.03.2007ರೊಳಗೆ ನಡೆಸಲು ಅನುಮತಿ ನೀಡಲಾಗಿತ್ತೆಂದು ತಿಳಿಸಿರುತ್ತಾರೆ. ವ್ಯವಸ್ಥಾಪಕ ನಿರ್ದೇಶಕರು 2006–07ನೇ ಸಾಲಿನ ಕಬ್ಬು ಅರೆಯುವಿಕೆ ಕಾರ್ಯವು ಏಪ್ರಿಲ್ ತಿಂಗಳವರೆಗೆ ಮುಂದುವರೆಯಲಿದ್ದು ವಾರ್ಷಿಕ ಮಹಾ ಸಭೆಯಲ್ಲಿ ಕಬ್ಬು ಬೆಳೆಗಾರ ಸದಸ್ಯರು ಸಭೆಯಲ್ಲಿ ಭಾಗವಹಿಸಲು ಅನುಕೂಲವಾಗುವ ಕಾರಣದಿಂದ ಹಾಗೂ 2005–06ನೇ ಸಾಲಿನ ಲೆಕ್ಕ ಪರಿಶೋಧನಾ ವರದಿ ಬಿಡುಗಡೆಯಾಗುವುದರಿಂದ 2005–06, 2006–07ನೇ ಸಾಲಿನ ವಾರ್ಷಿಕ ಮಹಾ ಸಭೆಗಳನ್ನು ಸೆಪ್ಟೆಂಬರ್ 2007ರೊಳಗೆ ನಡೆಸಲು ಅನುಮತಿ ನೀಡುವಂತೆ ಕೋರಿರುವುದಾಗಿ ತಿಳಿಸಿರುತ್ತಾರೆ. ಮಿತವ್ಯಯದ ದೃಷ್ಟಿಯಿಂದ ಕಾರ್ಖಾನೆಯ 2005–06 ಮತ್ತು 2006–07ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ:30.09.2007ರೊಳಗೆ ನಡೆಸಲು ಅನುಮತಿ ನೀಡುವಂತೆ ಸಕ್ಕರೆ ನಿರ್ದೇಶಕರು ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 29 ಸಸಕಾ 2007, ಬೆಂಗಳೂರು, ದಿನಾಂಕ:17ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಶ್ರೀನಿವಾಶಪುರ, ಇದರ 2005–06 ಮತ್ತು 2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ:30.09.2007ರೊಳಗೆ ನಡೆಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಈ ಕೆಳಗಿನ ಮಾರ್ಪಾಡುಗಳೊಂದಿಗೆ ಅನ್ವಯವಾಗುತ್ತದೆ ಎಂದು ನಿರ್ದೇಶಿಸುತ್ತದೆ. ಎಂದರೆ 27ರ

ಪ್ರಕರಣದಲ್ಲಿ 27ನೇ ಪ್ರಕರಣದ ಉಪ ಪ್ರಕರಣ (1) ಪರಂತುಕದಲ್ಲಿನ ಆರು ತಿಂಗಳು ಎಂಬ ಪದಗಳಿಗೆ ಬದಲಾಗಿ ಇಪ್ಪತ್ತನಾಲ್ಕು ತಿಂಗಳುಗಳು ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ:30.09.2007ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಕಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರಪುರಕರ್ ವೆಂಕಟೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್.993

## ಶಿಕ್ಷಣ ಸಚಿವಾಲಯ

**ವಿಷಯ:** ರಾಜ್ಯದ ಚಾಮರಾಜನಗರ ಜಿಲ್ಲೆಯ ಚಾಮರಾಜನಗರದಲ್ಲಿ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆ ಬಗ್ಗೆ- ಮಂಜೂರಾತಿ.

**ಪ್ರಸ್ತಾವನೆ:**

2007-08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರು ಈ ಕೆಳಗಿನಂತೆ ಘೋಷಿಸಿರುತ್ತಾರೆ.

"ಇಂಜಿನಿಯರಿಂಗ್ ಕಾಲೇಜುಗಳಿಗೆ ಏರುತ್ತಿರುವ ಬೇಡಿಕೆಯನ್ನು ಗಮನದಲ್ಲಿಟ್ಟುಕೊಂಡು ಕುಶಾಲನಗರ, ರಾಯಚೂರು, ಚಾಮರಾಜನಗರ ಮತ್ತು ಬಳ್ಳಾರಿಗಳಲ್ಲಿರುವ ಪಾಲಿಟೆಕ್ನಿಕ್‌ಗಳನ್ನು ಇಂಜಿನಿಯರಿಂಗ್ ಕಾಲೇಜುಗಳಾಗಿ ಮೇಲ್ದರ್ಜೆಗೇರಿಸಲು ಉದ್ದೇಶಿಸಿದ್ದೇನೆ. ಇದರ ಜೊತೆಗೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು ತನ್ನ ಸಂಯೋಜಿತ ಇಂಜಿನಿಯರಿಂಗ್ ಕಾಲೇಜನ್ನು ಹಾಸನದಲ್ಲಿ ಆರಂಭಿಸಲಿದೆ. ಈ ಎಲ್ಲಾ ಉದ್ದೇಶಗಳಿಗಾಗಿ 2007-08ನೇ ಸಾಲಿನಲ್ಲಿ 50 ಕೋಟಿ ರೂ.ಗಳನ್ನು ಮೀಸಲಿಡುತ್ತಿದ್ದೇನೆ."

ಈ ಉದ್ದೇಶಕ್ಕಾಗಿ 2007-08ನೇ ಸಾಲಿನ ಆಯವ್ಯಯದಲ್ಲಿ ಆಯವ್ಯಯ ಲೆಕ್ಕ ಶೀರ್ಷಿಕೆ 4202-02-104-01-13-386 ಅಡಿಯಲ್ಲಿ ಇಂಜಿನಿಯರಿಂಗ್ ಕಾಲೇಜುಗಳ ನಿರ್ಮಾಣಕ್ಕಾಗಿ ರೂ.5000.00 ಲಕ್ಷಗಳನ್ನು ಒದಗಿಸಲಾಗಿದೆ.

ಸರ್ಕಾರವು ಈ ಬಗ್ಗೆ ಚರ್ಚಿಸಿ ಸದ್ಯದಲ್ಲಿರುವ ಪಾಲಿಟೆಕ್ನಿಕ್‌ಗಳನ್ನು ಹಾಗೆಯೇ ಉಳಿಸಿಕೊಂಡು ಮೇಲ್ಕಂಡ ಸ್ಥಳಗಳಲ್ಲಿ ಹೊಸದಾಗಿ ಇಂಜಿನಿಯರಿಂಗ್ ಕಾಲೇಜುಗಳನ್ನು ಪ್ರಾರಂಭಿಸಲು ನಿರ್ಣಯಿಸಲಾಗಿರುತ್ತದೆ ಹಾಗೂ ಸದ್ಯ ಚಾಮರಾಜನಗರದಲ್ಲಿ ಹೊಸ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆ ಮಾಡಲು ಮಂಜೂರಾತಿ ನೀಡಲು ನಿರ್ಧರಿಸಿದೆ. ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 60 ಟಿಇಸಿ 2007, ಬೆಂಗಳೂರು, ದಿನಾಂಕ:25ನೇ ಮೇ, 2007**

ಚಾಮರಾಜನಗರ ಜಿಲ್ಲೆಯ ಚಾಮರಾಜನಗರದಲ್ಲಿ ಎಐಸಿಟಿಇ ಅನುಮೋದನೆಯನ್ನು ಕಾಯ್ದಿರಿಸಿ ಹೊಸ ಇಂಜಿನಿಯರಿಂಗ್ ಕಾಲೇಜನ್ನು 2007-08ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಸ್ಥಾಪನೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಕಾಲೇಜಿಗೆ ಅಗತ್ಯವಿರುವ ಸಿಬ್ಬಂದಿ ವಿವರಗಳು ಹಾಗೂ ಕಟ್ಟಡ ನಿರ್ಮಾಣ ಕುರಿತಂತೆ ಆಯವ್ಯಯ ನಿಗದಿಗೊಳಿಸಿ ಪ್ರತ್ಯೇಕವಾಗಿ ಆದೇಶವನ್ನು ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 246 ಆಕೋ-3/2007 ದಿನಾಂಕ:17.05.2007ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ.

ಪಿ.ಆರ್.994

**ವಿಷಯ:** ರಾಜ್ಯದ ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆಯಲ್ಲಿ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆ ಬಗ್ಗೆ- ಮಂಜೂರಾತಿ.

**ಪ್ರಸ್ತಾವನೆ:**

2007-08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರು ಈ ಕೆಳಗಿನಂತೆ ಘೋಷಿಸಿರುತ್ತಾರೆ.

"ಇಂಜಿನಿಯರಿಂಗ್ ಕಾಲೇಜುಗಳಿಗೆ ಏರುತ್ತಿರುವ ಬೇಡಿಕೆಯನ್ನು ಗಮನದಲ್ಲಿಟ್ಟುಕೊಂಡು ಕುಶಾಲನಗರ, ರಾಯಚೂರು, ಚಾಮರಾಜನಗರ ಮತ್ತು ಬಳ್ಳಾರಿಗಳಲ್ಲಿರುವ ಪಾಲಿಟೆಕ್ನಿಕ್‌ಗಳನ್ನು ಇಂಜಿನಿಯರಿಂಗ್ ಕಾಲೇಜುಗಳಾಗಿ

ಮೇಲ್ದರ್ಜೆಗೇರಿಸಲು ಉದ್ದೇಶಿಸಿದ್ದೇನೆ. ಇದರ ಜೊತೆಗೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು ತನ್ನ ಸಂಯೋಜಿತ ಇಂಜಿನಿಯರಿಂಗ್ ಕಾಲೇಜನ್ನು ಹಾಸನದಲ್ಲಿ ಆರಂಭಿಸಲಿದೆ. ಈ ಎಲ್ಲಾ ಉದ್ದೇಶಗಳಿಗಾಗಿ 2007–08ನೇ ಸಾಲಿನಲ್ಲಿ 50 ಕೋಟಿ ರೂ.ಗಳನ್ನು ಮೀಸಲಿಡುತ್ತಿದ್ದೇನೆ."

ಈ ಉದ್ದೇಶಕ್ಕಾಗಿ 2007–08ನೇ ಸಾಲಿನ ಆಯವ್ಯಯದಲ್ಲಿ ಆಯವ್ಯಯ ಲೆಕ್ಕ ಶೀರ್ಷಿಕೆ 4202–02–104–01–13–386 ಅಡಿಯಲ್ಲಿ ಇಂಜಿನಿಯರಿಂಗ್ ಕಾಲೇಜುಗಳ ನಿರ್ಮಾಣಕ್ಕಾಗಿ ರೂ.5000.00 ಲಕ್ಷಗಳನ್ನು ಒದಗಿಸಲಾಗಿದೆ.

ಸರ್ಕಾರವು ಈ ಬಗ್ಗೆ ಚರ್ಚಿಸಿ ಸದ್ಯದಲ್ಲಿರುವ ಪಾಲಿಟೆಕ್ನಿಕ್‌ಗಳನ್ನು ಹಾಗೆಯೇ ಉಳಿಸಿಕೊಂಡು ಮೇಲ್ಕಂಡ ಸ್ಥಳಗಳಲ್ಲಿ ಹೊಸದಾಗಿ ಇಂಜಿನಿಯರಿಂಗ್ ಕಾಲೇಜುಗಳನ್ನು ಪ್ರಾರಂಭಿಸಲು ನಿರ್ಣಯಿಸಲಾಗಿರುತ್ತದೆ

ಮೇಲೆ ಹೇಳಿರುವ ಸ್ಥಳಗಳ ಜೊತೆಗೆ ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆಯಲ್ಲಿಯೂ ಸಹ ಸರ್ಕಾರದ ವತಿಯಿಂದಲೇ ಒಂದು ಇಂಜಿನಿಯರಿಂಗ್ ಕಾಲೇಜನ್ನು ಪ್ರಾರಂಭಿಸಲು ನಿರ್ಧರಿಸಲಾಗಿದೆ.

ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 60 ಟಿಇಸಿ 2007(2), ಬೆಂಗಳೂರು, ದಿನಾಂಕ:25ನೇ ಮೇ, 2007**

ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆಯಲ್ಲಿ ಎಐಸಿಟಿಇ ಅನುಮೋದನೆಯನ್ನು ಕಾಯ್ದಿರಿಸಿ ಹೊಸ ಇಂಜಿನಿಯರಿಂಗ್ ಕಾಲೇಜನ್ನು 2007–08ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಸ್ಥಾಪನೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಕಾಲೇಜಿಗೆ ಅಗತ್ಯವಿರುವ ಸಿಬ್ಬಂದಿ ವಿವರಗಳು ಹಾಗೂ ಕಟ್ಟಡ ನಿರ್ಮಾಣ ಕುರಿತಂತೆ ಆಯವ್ಯಯ ನಿಗದಿಗೊಳಿಸಿ ಪ್ರತ್ಯೇಕವಾಗಿ ಆದೇಶವನ್ನು ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 246 ಆಕೋ–3/2007 ದಿನಾಂಕ:17.05.2007ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್.1006

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

**ವಿಷಯ:** ರಾಜ್ಯದ ಹಾಸನ ಜಿಲ್ಲೆಯ ಹಾಸನದಲ್ಲಿ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆ ಬಗ್ಗೆ–ಮಂಜೂರಾತಿ.

**ಪ್ರಸ್ತಾವನೆ:**

2007–08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರು ಈ ಕೆಳಗಿನಂತೆ ಘೋಷಿಸಿರುತ್ತಾರೆ.

"ಇಂಜಿನಿಯರಿಂಗ್ ಕಾಲೇಜುಗಳಿಗೆ ಏರುತ್ತಿರುವ ಬೇಡಿಕೆಯನ್ನು ಗಮನದಲ್ಲಿಟ್ಟುಕೊಂಡು ಕುಶಾಲನಗರ, ರಾಯಚೂರು, ಚಾಮರಾಜನಗರ ಮತ್ತು ಬಳ್ಳಾರಿಗಳಲ್ಲಿರುವ ಪಾಲಿಟೆಕ್ನಿಕ್‌ಗಳನ್ನು ಇಂಜಿನಿಯರಿಂಗ್ ಕಾಲೇಜುಗಳಾಗಿ ಮೇಲ್ದರ್ಜೆಗೇರಿಸಲು ಉದ್ದೇಶಿಸಿದ್ದೇನೆ. ಇದರ ಜೊತೆಗೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು ತನ್ನ ಸಂಯೋಜಿತ ಇಂಜಿನಿಯರಿಂಗ್ ಕಾಲೇಜನ್ನು ಹಾಸನದಲ್ಲಿ ಆರಂಭಿಸಲಿದೆ. ಈ ಎಲ್ಲಾ ಉದ್ದೇಶಗಳಿಗಾಗಿ 2007–08ನೇ ಸಾಲಿನಲ್ಲಿ 50 ಕೋಟಿ ರೂ.ಗಳನ್ನು ಮೀಸಲಿಡುತ್ತಿದ್ದೇನೆ."

ಈ ಉದ್ದೇಶಕ್ಕಾಗಿ 2007–08ನೇ ಸಾಲಿನ ಆಯವ್ಯಯದಲ್ಲಿ ಆಯವ್ಯಯ ಲೆಕ್ಕ ಶೀರ್ಷಿಕೆ 4202–02–104–01–13–386 ಅಡಿಯಲ್ಲಿ ಇಂಜಿನಿಯರಿಂಗ್ ಕಾಲೇಜುಗಳ ನಿರ್ಮಾಣಕ್ಕಾಗಿ ರೂ.5000.00 ಲಕ್ಷಗಳನ್ನು ಒದಗಿಸಲಾಗಿದೆ.

ಸರ್ಕಾರವು ಈ ಬಗ್ಗೆ ಚರ್ಚಿಸಿ ಸದ್ಯದಲ್ಲಿರುವ ಪಾಲಿಟೆಕ್ನಿಕ್‌ಗಳನ್ನು ಹಾಗೆಯೇ ಉಳಿಸಿಕೊಂಡು ಮೇಲ್ಕಂಡ ಸ್ಥಳಗಳಲ್ಲಿ ಹೊಸದಾಗಿ ಇಂಜಿನಿಯರಿಂಗ್ ಕಾಲೇಜುಗಳನ್ನು ಪ್ರಾರಂಭಿಸಲು ನಿರ್ಣಯಿಸಲಾಗಿರುತ್ತದೆ.

ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು ತನ್ನ ಸಂಯೋಜಿತ ಇಂಜಿನಿಯರಿಂಗ್ ಕಾಲೇಜನ್ನು ಹಾಸನದಲ್ಲಿ ಆರಂಭಿಸುವ ಬಗ್ಗೆ ವಿಶ್ವವಿದ್ಯಾಲಯದೊಂದಿಗೆ ಸಮಾಲೋಚಿಸಲಾಯಿತು. ವಿಶ್ವವಿದ್ಯಾಲಯವು ಈ ವಿಷಯವನ್ನು ವಿಶ್ವವಿದ್ಯಾಲಯದ ವಿದ್ಯಾವಿಧಾನಮಂಡಳ ಹಾಗೂ ಕಾರ್ಯಕಾರಿ ಪರಿಷತ್ತುಗಳ ಸಭೆಗಳಲ್ಲಿ ಚರ್ಚಿಸಿ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು ಕೇವಲ ಒಂದು ಘಟಕ ತಾಂತ್ರಿಕ ಮಹಾವಿದ್ಯಾಲಯವನ್ನು ಹೊಂದಲು ಸಾಧ್ಯವಿರುವುದರಿಂದ ರಾಮನಗರದಲ್ಲಿ 2007–08ನೇ ಶೈಕ್ಷಣಿಕ ವರ್ಷಕ್ಕೆ ಸ್ಥಾಪಿತಗೊಳ್ಳಲಿರುವ ಸರ್ಕಾರಿ ಮಹಾವಿದ್ಯಾಲಯವನ್ನೇ ವಿಶ್ವೇಶ್ವರಯ್ಯ ತಾಂತ್ರಿಕ ಮಹಾವಿದ್ಯಾಲಯದ ಘಟಕ ಮಹಾವಿದ್ಯಾಲಯವನ್ನಾಗಿ ಆರಂಭಿಸಬೇಕೆಂದು ವಿದ್ಯಾವಿಧಾನಮಂಡಳ ಹಾಗೂ ಕಾರ್ಯಕಾರಿ ಪರಿಷತ್ತುಗಳ ಸಭೆಗಳಲ್ಲಿ ನಿರ್ಧರಿಸಲಾಗಿದೆ ಎಂದು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ಕುಲಪತಿಗಳು

ತಿಳಿಸಿದ ಹಿನ್ನೆಲೆಯಲ್ಲಿ ಹಾಸನದಲ್ಲಿ ಪ್ರಾರಂಭಿಸಲು ಉದ್ದೇಶಿಸಿರುವ ಇಂಜಿನಿಯರಿಂಗ್ ಕಾಲೇಜನ್ನು ಸರ್ಕಾರದ ವತಿಯಿಂದಲೇ ಪ್ರಾರಂಭಿಸಲು ನಿರ್ಧರಿಸಲಾಗಿರುತ್ತದೆ.

ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 60 ಟಿಇಸಿ 2007(1), ಬೆಂಗಳೂರು, ದಿನಾಂಕ:25ನೇ ಮೇ, 2007**

ಹಾಸನ ಜಿಲ್ಲೆಯ ಹಾಸನದಲ್ಲಿ ಎಐಸಿಟಿಇ ಅನುಮೋದನೆಯನ್ನು ಕಾಯ್ದಿರಿಸಿ ಹೊಸ ಇಂಜಿನಿಯರಿಂಗ್ ಕಾಲೇಜನ್ನು 2007–08ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಸ್ಥಾಪನೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಕಾಲೇಜಿಗೆ ಅಗತ್ಯವಿರುವ ಸಿಬ್ಬಂದಿ ವಿವರಗಳು ಹಾಗೂ ಕಟ್ಟಡ ನಿರ್ಮಾಣ ಕುರಿತಂತೆ ಆಯವ್ಯಯ ನಿಗದಿಗೊಳಿಸಿ ಪ್ರತ್ಯೇಕವಾಗಿ ಆದೇಶವನ್ನು ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 246 ಆಕೋ–3/2007 ದಿನಾಂಕ:17.05.2007ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್.1007 ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

## ಕಂದಾಯ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಕಂಇ 150 ಮುನೋಮು 2006, ಬೆಂಗಳೂರು, ದಿನಾಂಕ:24ನೇ ಮೇ, 2007**

ದಿನಾಂಕ:16.05.2007ರ ಸರ್ಕಾರದ ಆದೇಶ ಸಂಖ್ಯೆ: ಕಂಇ 150 ಮುನೋಮು 2006ರಲ್ಲಿನ ಪ್ಯಾರಾ 5ರಲ್ಲಿ ದಿನಾಂಕ:11.01.3007 ಎಂದು ಇರುವುದನ್ನು ದಿನಾಂಕ:11.01.2007ರಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಫ್. ಯರಗೊಪ್ಪ**

ಪಿ.ಆರ್.1008 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಸಮಾಜ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಕಇ 220 ಪವಯೋ 2006, ಬೆಂಗಳೂರು, ದಿನಾಂಕ:25ನೇ ಮೇ, 2007**

ಆದೇಶ ಸಂಖ್ಯೆ: ಸಕಇ 220 ಪವಯೋ 2006, **ದಿನಾಂಕ:08.01.2007**ರ ಆದೇಶ ಭಾಗದ ಕ್ರಮಸಂಖ್ಯೆ (1)ರಲ್ಲಿ ಕೊಳ್ಳೆಗಾಲ ಟೌನ್, ಕೊಳ್ಳೇಗಾಲ ಎಂದಿರುವುದರ ಎದುರಿಗೆ ನಮೂದಿಸಿರುವ "ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ" ಎಂದಿರುವುದನ್ನು "ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿನಿಲಯ" ಎಂದು ತಿದ್ದುಪಡಿ ಮಾಡಲಾಗಿದ್ದು, ಅದರಂತೆ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಬಾಟೆ**

ಪಿ.ಆರ್.1013 ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.

## ಕಂದಾಯ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಆರ್‌ಡಿ 66 ಎಡಿಇ 2002, ಬೆಂಗಳೂರು, ದಿನಾಂಕ:26ನೇ ಮೇ, 2007**

ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 66 ಎಡಿಇ 2002, **ದಿನಾಂಕ:21.02.2007**ರ ಆದೇಶದ ಭಾಗದ ಕಂಡಿಕೆ (2)ರ ನಾಲ್ಕನೇ ಸಾಲಿನಲ್ಲಿ "ರೂ.640/– (320+320) ಮೊತ್ತವನ್ನು ಕಡಿತಗೊಳಿಸಿ ಸದರಿಯವರ ಪ್ರಸ್ತುತ ವೇತನ ಶ್ರೇಣಿಯಲ್ಲಿ ವೇತನವನ್ನು ರೂ.10,560/–"ಕ್ಕೆ ಎಂಬ ಪದಗಳು ಮತ್ತು ಅಂಕೆಗಳಿಗೆ ಬದಲಾಗಿ "ರೂ.580/– (320+260) ಮೊತ್ತವನ್ನು ಕಡಿತಗೊಳಿಸಿ ಸದರಿಯವರ ಪ್ರಸ್ತುತ ವೇತನ ಶ್ರೇಣಿಯಲ್ಲಿ ವೇತನವನ್ನು ರೂ.10,620/–"ಕ್ಕೆ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್.1026 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

## ಶಿಕ್ಷಣ ಸಚಿವಾಲಯ

**ವಿಷಯ:** ಎಡುಸ್ಯಾಟ್ ಕಾರ್ಯಕ್ರಮಗಳಿಗೆ ಹಾಜರಾಗುವ ವಿಷಯ ತಜ್ಞರಿಗೆ ಭತ್ಯೆಗಳನ್ನು ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರಸಂಖ್ಯೆ:ಕಾಶಿಇ:ಶೈವಿ: 134: ಎಡುಸ್ಯಾಟ್:2006 ದಿನಾಂಕ:26.10.2006.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರದಲ್ಲಿ ಕಾಲೇಜು ಶಿಕ್ಷಣ ಇಲಾಖೆಯಲ್ಲಿ 2006–07ನೇ ಸಾಲಿನಲ್ಲಿ ಎಡುಸ್ಯಾಟ್ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಸರ್ಕಾರಿ ಆದೇಶ ಸಂಖ್ಯೆ: ಇಡಿ:38:ಯೋಯೋಕಾ 2006: ದಿನಾಂಕ:28.02.2006ರಲ್ಲಿ ಆದೇಶ ನೀಡಿದ್ದು ಅದರ ಹಿನ್ನೆಲೆಯಲ್ಲಿ ಈಗಾಗಲೇ ಕ್ರಮಗಳನ್ನು ಕೈಗೊಂಡಿದ್ದು, ಸದರಿ ಕಾರ್ಯಕ್ರಮಕ್ಕೆ ಹಾಜರಾಗುವ ವಿಷಯ ತಜ್ಞರಿಗೆ, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು ವಿಷಯ ತಜ್ಞರಿಗೆ ನೀಡುತ್ತಿರುವ ಭತ್ಯೆಗಳ ಮಾದರಿಯಲ್ಲೇ ಭತ್ಯೆಗಳನ್ನು ನೀಡಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ. ವಿವರ ಕೆಳಕಂಡಂತಿದೆ.

1. Honorarium Rs.750/- per session to handle live class.
2. Content charges: Rs.750/- per session of Sixty minutes [This has been further split into Rs.500/- for raw content typed in MS Word and Rs.250/- for content preparation/ typing]
3. TA/ DA or Local conveyance allowance as per University rules.
4. Each subject is normally covered in about 35 session.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 309 ಯೋಯೋಕ 2006, ಬೆಂಗಳೂರು, ದಿನಾಂಕ:9ನೇ ಮೇ, 2007**

**[ಇಡಿ: 74: ಸ್ವೀಮರ (ಯುನಿಕ್) 2006 ದಿನಾಂಕ:09.05.2007]**

2006–07ನೇ ಸಾಲಿನಲ್ಲಿ ಎಡುಸ್ಯಾಟ್ ಕಾರ್ಯಕ್ರಮದಲ್ಲಿ ಹಾಜರಾಗುವ ವಿಷಯ ತಜ್ಞರಿಗೆ ಈ ಕೆಳಕಂಡಂತೆ ಭತ್ಯೆಗಳನ್ನು ನೀಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರವು ಅನುಮತಿ ನೀಡಿರುತ್ತದೆ.

1. Honorarium Rs.750/- per session to handle live class.
2. Content charges: Rs.750/- per session of Sixty minutes [This has been further split into Rs.500/- for raw content typed in MS Word and Rs.250/- for content preparation/ typing]
3. TA/ DA or Local conveyance allowance as per K.C.S. Rules.
4. Each subject is normally covered in about 35 session.

ಮೇಲ್ಕಂಡ ಭತ್ಯೆಗಳನ್ನು ಲೆಕ್ಕಶೀರ್ಷಿಕೆ: 2202–03–103–2–01–059 [ಪಿವಿ] [ಯೋಜನೆ] ವೇತನೇತರ ಬಾಬ್ತಿನಲ್ಲಿ ನಿಗದಿಯಾಗಿರುವ ಆಯವ್ಯಯದ ಮಿತಿಯೊಳಗೆ ಭರಿಸತಕ್ಕದ್ದು.

ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿ.ಇ.1123: ಐಎಫ್ (ಬಿಎ) 2006 ದಿನಾಂಕ:04.12.2006ರ ಸಹಮತಿಯನ್ವಯ ಮತ್ತು ದಿನಾಂಕ:11.04.2007 ಸಂಖ್ಯೆ: ಅಇ 09 ವೆಚ್ಚ–8/2007ರ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿಯ ಸಹಮತಿಯನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ).

ಪಿ.ಆರ್.1038

## AGRICULTURE AND HORTICULTURE SECRETARIAT

### CORRIGENDUM

**No. AHD 118 AUM 2007, Bangalore, Dated:1st June, 2007**

Para-4 of the Order portion of Order No. AHD 63 AUM 2003 Dated:10.07.2003 shall be and shall always be deemed to have been deleted.

By Order and in the name of the Governor of Karnataka,

**G.K. GURANI**

Under Secretary to Government,
Agriculture & Horticulture Department.

PR-1068

## ವಾಣಿಜ್ಯ ಮತ್ತು ಕೈಗಾರಿಕ ಸಚಿವಾಲಯ

**ವಿಷಯ:** ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಕ್ಷೇತ್ರ ಇಲಾಖೆಯಾದ ಕೈಮಗ್ಗ ಮತ್ತು ಜವಳಿ ಇಲಾಖೆಯ ಸಿಬ್ಬಂದಿ ಶೇ.80 ರಷ್ಟು ಹುದ್ದೆಯನ್ನು ರದ್ದುಪಡಿಸುವ ಬಗ್ಗೆ ಆದೇಶ.

**ಓದಲಾಗಿದೆ:** ದಿನಾಂಕ:10.05.2007ರಂದು ನಡೆದ ಅಧಿಕಾರಯುತ ಸಮಿತಿಯ ನಡವಳಿಗಳು (ಸಿಆಸುಇ 138 ಈಸಪ 2005 (ಭಾ) ದಿನಾಂಕ:25.05.2007)

**ಪ್ರಸ್ತಾವನೆ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ:10.05.2007ರಂದು ನಡೆದ ಅಧಿಕಾರಯುತ ಸಮಿತಿ ಸಭೆಯ ನಡವಳಿಯಲ್ಲಿ ದಿನಾಂಕ:01.04.2000ದಂದು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಕ್ಷೇತ್ರದ ಇಲಾಖೆಯಾದ ಕೈಮಗ್ಗ ಮತ್ತು ಜವಳಿ ಇಲಾಖೆಯಲ್ಲಿ ಖಾಲಿಯಿದ್ದ ಹುದ್ದೆ ಪೈಕಿ ಶೇ.80ರಷ್ಟು ಹುದ್ದೆಗಳನ್ನು ರದ್ದುಪಡಿಸು ಸಂಬಂಧದಲ್ಲಿ ಇಲಾಖಾ ಅಧಿಕಾರಿಗಳು ನೀಡಿದ ವಿವರಗಳನ್ವಯ ದಿನಾಂಕ:01.04.200ಕ್ಕೆ ಖಾಲಿಯಿದ್ದ 35 ಹುದ್ದೆಗಳ ಪೈಕಿ ಎರಡು ದ್ವಿತೀಯ ದರ್ಜೆಯ ಹುದ್ದೆಗಳು ಮತ್ತು ಎರಡು ಗ್ರೂಪ್ ಡಿ ಹುದ್ದೆಗಳು ಸೇರಿದಂತೆ ನಾಲ್ಕು ಹುದ್ದೆಗಳನ್ನು ರದ್ದುಗೊಳಿಸಲು ಸಮಿತಿಯ ಒಪ್ಪಿಗೆ ನೀಡಿರುತ್ತದೆ.

ಸದರಿ ಪ್ರಸಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 06 ಜಕೈಸೇ 2007, ಬೆಂಗಳೂರು, ದಿನಾಂಕ:4ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ದಿನಾಂಕ:01.04.2000ದಂದು ಕೈಮಗ್ಗ ಮತ್ತು ಜವಳಿ ಇಲಾಖೆಯಲ್ಲಿ ಖಾಲಿಯಿದ್ದ ಎರಡು ದ್ವಿತೀಯ ದರ್ಜೆಯ ಸಹಾಯಕರ ಹುದ್ದೆಗಳು ಹಾಗೂ ಎರಡು ಗ್ರೂಪ್ ಡಿ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ರವಿಕುಮಾರ್**

ಪಿ.ಆರ್.1069

ಪೀಠಾಧಿಕಾರಿ (ಜವಳಿ)

ವಾಣಿಜ್ಯ ಮತ್ತು ಕೈಗಾರಿಕ ಇಲಾಖೆ.

## ವಸತಿ ಸಚಿವಾಲಯ

**ವಿಷಯ:** ಹಾಸನ ಜಿಲ್ಲೆಯ ಬೇಲೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ/ 42/ ಹೆಚ್‌ಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಹಾಸನ ಜಿಲ್ಲೆಯ ಬೇಲೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 29/ಹೆಚ್‌ಎಎಸ್/ 2007, ಬೆಂಗಳೂರು, ದಿನಾಂಕ:30ನೇ ಮೇ, 2007**

ಮೇಲ್ಕಂಡ ಸಂದರ್ಭದಲ್ಲಿ ಹಾಸನ ಜಿಲ್ಲೆಯ ಬೇಲೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀಮತಿ ಜಯಶ್ರೀ ಕೋಂ ಗುರುರಾಜ್, ಅಂಬೇಡ್ಕರ್ ನಗರ, ಬೇಲೂರು ಪಟ್ಟಣ, ಹಾಸನ ಜಿಲ್ಲೆ. | ಸದಸ್ಯರು |
| 2. | ಶ್ರೀ ಸಿಕಂದರ್ ಹಯಾತ್ ಬಿನ್ ಮಹಮದ್ ಗೌಸ್, ನೆಹರೂನಗರ, ಬೇಲೂರು ಪಟ್ಟಣ, ಹಾಸನ ಜಿಲ್ಲೆ. | ಸದಸ್ಯರು |
| 3. | ಶ್ರೀಮತಿ ಸವಿತ, ಕೋಂ ಪ್ರಭಾಕರ್, ಸಿದ್ದೇಶ್ವರ ಬೀದಿ, ಬೇಲೂರು ಪಟ್ಟಣ, ಹಾಸನ ಜಿಲ್ಲೆ. | ಸದಸ್ಯರು |
| 4. | ಶ್ರೀ ಮಹದೇವಪ್ಪ ಬಿನ್ ಚನ್ನೇಗೌಡ ಗುರುಪ್ಪಗೌಡರ ಬೀದಿ, ಬೇಲೂರು ಪಟ್ಟಣ, ಹಾಸನ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಂಗಮ್ಮ**

ಪಿ.ಆರ್.1070

ಪೀಠಾಧಿಕಾರಿ–2,

ವಸತಿ ಇಲಾಖೆ.

**FINANCE SECRETARIAT**

**Subject:** General delegation of Common Financial Powers to Heads of Departments and others- Review of

**Read:** Government Order No FD 1 TFP 2001 Dated:02.02.2001.

**Preamble:**

In Government Order read above certain enhanced financial Powers have been delegated to the Heads of Departments and other departmental Officers as indicated in the annexure of the said order. But the powers of entering in to Annual Contract for maintenance of office equipments have not been delegated. Hence some of the departments have requested the Government to delegate this financial power as every time they have to approach Government for to entering in to Annual contract for maintenance of office equipments which is time consuming.

The proposal has been examined and hence this order.

**Government Order No. FD 44 TFC 2006, Bangalore, Dated:22nd May, 2007**

Government are pleased to delegate further financial powers to the Heads of Departments for entering in to Annual contract for maintenance of office equipments as specified in the annexure to this order.

This power is in continuation of the items included in the Annexure to the Government Order No.FD 1 TFP 2001 Dated:02.02.2001.

By Order and in the name of the Governor of Karnataka,

**C. SHAMA RAO**

Under Secretary to Government (FR, BC &C),

Finance Department.

**Annexure to Government Order No.FD 44 TFC 2006, Dated:22nd May, 2007**

| Sl. No. | Description of Power | Heads of the Departments | Divisional Level Officers | District Level Officers | Sub-Divisional Level Officers | Taluk level Officers |
|---|---|---|---|---|---|---|
| 56 | Annual contract for maintenance of office equipments like: Frankling machnies Zerox machines Duplicating Machines copying Machines Inter com.etc. | Full Powers | -- | -- | -- | -- |

**C. SHAMA RAO**

PR-1159

Under Secretary to Government (FR, BC &C),

Finance Department.

**FINANCE SECRETARIAT**

**CORRIGENDUM**

**No. FD 27 SRP 2005, Bangalore, Dated:8th June, 2007**

The words "where a Government servant holding a post in any one of the first 11 scales of pay gets promotion before the completion of the period of 20 years prescribed for grant of additional increment" appearing in first para of the order portion of Government Order No.FD 27 SRP 2005 (1) Dated:22.08.2005, shall be read as follows:

"Where a Government servants holding a post in any one of the first 11 scales of pay is promoted regularly to the higher post after completion of more than 20 years of service prior to 01-04-2002 or gets promotion before the completion of the period of 20 years prescribed for grant of additional increment".

By Order and in the name of the Governor of Karnataka,

**N.T. NAIK**

PR-1163

Under Secretary to Government,

Finance Department (Services-2)

## ಇಂಧನ ಸಚಿವಾಲಯ

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಬಗ್ಗೆ–ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಆರ್‌ಎಂಎಂಪಿಎಲ್/2006/2407 ದಿನಾಂಕ: 28.10.2006.

2. ದಿನಾಂಕ: 29.12.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: Ramgad Minerals & Mining (P) Ltd. ಕಂಪನಿಗೆ ಬಳ್ಳಾರಿ ಜಿಲ್ಲೆಯಲ್ಲಿ 2.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ: 4 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 459 ಎನ್‌ಸಿಇ 2006,ಬೆಂಗಳೂರು, ದಿನಾಂಕ:17ನೇ ಮಾರ್ಚ್, 2007**

ಮೆ:: Ramgad Minerals & Mining (P) Ltd. ಕಂಪನಿಗೆ ಬಳ್ಳಾರಿ ಜಿಲ್ಲೆಯಲ್ಲಿ 2.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Proposed capacity in MW | Near by villages of the proposed area and district. | Geographical area description of the project |
|---|---|---|
| 2.5 MW<br>(2x1250 kW) | Rajapura, Vyasanakere, Bellary Disrtict. | A small contigous ridge oriented in NW-SE direction situated in the RH side of Chitradurga-Hospet road. This site is located close by to Tungabhadra Reservoir. The project can be developed subject to clearances of Tungabhadra Development Authority and National Highway. The proposed area is covered in the following Geographical co-ordinates:<br>**Latitude: 15°13'58"- 15°14'22" N**<br>**Longitude: 76°21'44"- 76°22'18" E** |
| **Total** | **2.5 MW** | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್)

ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್'/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸಿಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಪ್ರಸ್ತುತ ಹಂಚಿಕೆ ಸಮಿತಿ ಸಭೆಯಲ್ಲಿ ಶಿಫಾರಸ್ಸು ಮಾಡಿರುವ ಕಂಪನಿಗಳಿಗೆ 2006–07 ನೇ ಸಾಲಿನಲ್ಲಿ 100 ಮೆಗಾ ವ್ಯಾಟ್‌ಗೆ ಮೀರದಂತೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಗಳೊಂದಿಗೆ ಮೊದಲ ಅರ್ಜಿದಾರರಿಗೆ ಆದ್ಯತೆ ಮೇಲೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು (ಪಿ.ಪಿ.ಎ) ಮಾಡಿಕೊಳ್ಳತಕ್ಕದ್ದು.
12. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.989

**ವಿಷಯ:** ಮೆ: ವಾಸು ಪವರ್ ಟೆಕ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕೆಳಗೂರು ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 28 ಎನ್‌ಸಿಇ 96 (7) ದಿನಾಂಕ: 24.7.1996.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ 06 ಎನರ್ಜಿ 2006 2599 ದಿನಾಂಕ: 28.12.2006.

3) ಸರ್ಕಾರದ ಕಾರಣ ಕೇಳಿ ನೀಡಿರುವ ನೋಟೀಸು ಸಂಖ್ಯೆ: ಇಎನ್ 2 ಎನ್‌ಸಿಇ 2007 ದಿನಾಂಕ: 10.1.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮೆ:: ವಾಸು ಪವರ್ ಟೆಕ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕೆಳಗೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು ಹಾಗೂ

ಅಭಿವೃದ್ಧಿದಾರರು ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆ ಕರಾರಿನ ಪ್ರಕಾರ ಸದರಿ ಯೋಜನೆಯನ್ನು 36 ತಿಂಗಳ ಒಳಗಾಗಿ ಅನುಷ್ಠಾನ ಮಾಡಬೇಕಾಗಿತ್ತು. ಆದರೆ ಅಭಿವೃದ್ಧಿದಾರರು ಇದುವರೆಗೂ ಯೋಜನೆಯನ್ನು ಅನುಷ್ಠಾನ ಮಾಡಿರುವುದಿಲ್ಲ.

ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ವಾಸು ಪವರ್ ಟೆಕ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಅಭಿವೃದ್ಧಿದಾರರು ಯೋಜನೆಯ ಹಂಚಿಕೆಯಾಗಿ 10 ವರ್ಷ ಕಳೆದರೂ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಕೈಗೊಂಡಿರುವುದಿಲ್ಲವೆಂದು ವರದಿ ನೀಡುತ್ತಾ ಸದರಿ ಕಂಪನಿಗೆ ಹಂಚಿಕೆ ಮಾಡಲಾಗಿರುವ ಆದೇಶವನ್ನು ರದ್ದು ಪಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (3)ರ ನೋಟೀಸಿನಲ್ಲಿ ಸದರಿ ಅಭಿವೃದ್ಧಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯೋಜನೆ ಹಂಚಿಕೆಯಾಗಿ 10 ವರ್ಷ ಕಳೆದರೂ ಯಾವುದೇ ಪ್ರಗತಿ ಸಾಧಿಸದೇ ಇರುವುದರಿಂದ ಯೋಜನೆಯ ಹಂಚಿಕೆಯನ್ನು ರದ್ದು ಮಾಡುವ ನಿಟ್ಟಿನಲ್ಲಿ 15 ದಿನಗಳೊಳಗಾಗಿ ಲಿಖಿತವಾಗಿ ಕಾರಣವನ್ನು ನೀಡಬೇಕೆಂದು ತಿಳಿಸಲಾಗಿತ್ತು. ಆದರೆ ಸದರಿ ಕಾರಣ ಕೇಳುವ ನೋಟೀಸಿಗೆ ಅಭಿವೃದ್ಧಿದಾರರಿಂದ ಯಾವುದೇ ಉತ್ತರ ಬಂದಿರುವುದಿಲ್ಲ. ಆದ್ದರಿಂದ ಸದರಿ ಹಂಚಿಕೆ ಆದೇಶವನ್ನು ರದ್ದು ಮಾಡುವ ನಿಟ್ಟಿನಲ್ಲಿ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 161 ಎನ್‌ಸಿಇ 2007, ಬೆಂಗಳೂರು, ದಿನಾಂಕ:15ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರದ ಆದೇಶ ಸಂಖ್ಯೆ: ಡಿಇ 28 ಎನ್‌ಸಿಇ 96 (7) ದಿನಾಂಕ: 24.7.1996 ರಲ್ಲಿ ಮೆ:: ವಾಸು ಪವರ್ ಟೆಕ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕೆಳಗೂರು ಕಿರು ಜಲ ಯೋಜನೆಗೆ ನೀಡಿದ್ದ ಹಂಚಿಕೆ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್,**

ಪಿ.ಆರ್.985

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ENERGY SECRETARIAT

**Sub:** Change of company's name from M/s Armugam Renewable Energy System Pvt. Ltd. to M/s Armugam Power Projects Pvt. Ltd. -reg.

**Read:** 1) Government Order No: EN 52 NCE 2006 dated: 17.3.2007.

2) Letter No: KREDL / 06 / Cauvery / 2007 / 1047 dated: 11.5.2007 received from the Managing Director, Karnataka Renewable Energy Development Limited, Bangalore.

**PREAMBLE**:

In the Government Order read at (1) above sanction has been accorded to implement 5.00 MW Cauvery Mini Hydel Scheme to M/s Armugam Renewable Energy System Pvt. Ltd. across Cauvery River near Shivanasamudram village, Kollegal Taluk, Chamarajnagar District.

The Managing Director, Karnataka Renewable Energy Development Limited, Bangalore, in his letter read at (2) above while enclosing representation dated: 30.4.2007 of M/s Armugam Renewable Energy System Pvt. Ltd. has recommended to the Government for Change of Company's name from M/s Armugam Renewable Energy System Pvt. Ltd. to M/s Armugam Power Projects Pvt. Ltd. which is their sister concern company, to implement the Cauvery Mini Hydel Scheme. The Registrar of Companies, Karnataka has issued a certificate in this regard.

The proposal has been examined at the Government level and hence the order : -

**Government Order No: EN 189 NCE 2007, Bangalore, Dated:17th May, 2007**

Government accords approval for the Change of Company's name from M/s Armugam Renewable Energy System Pvt. Ltd. to M/s Armugam Power Projects Pvt. Ltd. (a sister concern company) to implement 5.00 MW Cauvery Mini Hydel Scheme across Cauvery River near Shivanasamudram village, Kollegal Taluk, Chamarajnagar District.

The terms and conditions of the Government Order read at (1) above shall continue as it is.

By Order and in the Name of Governor of Karnataka,

PR-990

**SURESH.B.KRISHNAPPANAVAR**

Under Secretary to Government,

Energy Department.

**ಇಂಧನ ಸಚಿವಾಲಯ**

**ವಿಷಯ:** ಮೆ: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಾಂಡಿಯ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 103 ಎನ್‌ಸಿಇ 2004 ದಿನಾಂಕ: 13.5.2004.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕಾಂಡಿಯ/2007/906 ದಿನಾಂಕ: 21.4.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮೆ: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಕಂಡಿಯ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ (ಮಾರ್ಕಂಡೇಯ ದೇವಸ್ಥಾನ ಹಿಂಬದಿ) 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಾಂಡಿಯ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೆ ಒಳಪಡಿಸಿ ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ಪಿ.ಪಿ.ಎ ಮಾಡಿಕೊಳ್ಳಲು ವಿಳಂಬವಾಗಿರುವುದರಿಂದ ಕಂಪನಿಯವರ ಕೋರಿಕೆ ಮೇರೆಗೆ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಮುಂದಿನ 36 ತಿಂಗಳುಗಳ ಅವಧಿಗೆ ವಿಸ್ತರಿಸಲು ಹಾಗೂ ಮುಂದೇ ಕಾಲಾವಧಿ ವಿಸ್ತರಣೆಗೆ ಅವಕಾಶವಿಲ್ಲವೆಂಬ ಷರತ್ತನ್ನೊಳಗೊಂಡು ಸರ್ಕಾರಕ್ಕೆ ಶಿಫಾರಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 148 ಎನ್‌ಸಿಇ 2007, ಬೆಂಗಳೂರು, ದಿನಾಂಕ:26ನೇ ಮೇ, 2007**

ಸರ್ಕಾರವು ಮೆ: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಕಂಡಿಯ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ (ಮಾರ್ಕಂಡೇಯ ದೇವಸ್ಥಾನ ಹಿಂಬದಿ) 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಾಂಡಿಯ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಮುಂದೆ ಕಾಲಾವಧಿ ವಿಸ್ತರಣೆಗೆ ಅವಕಾಶವಿರುವುದಿಲ್ಲವೆಂಬ ಷರತ್ತಿಗೊಳಪಟ್ಟು ಕಾಲಾವಕಾಶವನ್ನು ಮುಂದಿನ 36 ತಿಂಗಳುಗಳ ಅವಧಿಗೆ ವಿಸ್ತರಿಸಲಾಗಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ:** ಮೆ:: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕುದರಬ್ಬಿ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 104 ಎನ್‌ಸಿಇ 2004 ದಿನಾಂಕ: 13.5.2004.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕುದುರಬ್ಬಿ/2007/907 ದಿನಾಂಕ: 21.4.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮೆ:: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಕುದರಬ್ಬಿ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕುದರಬ್ಬಿ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೆ ಒಳಪಡಿಸಿ ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ಪಿ.ಪಿ.ಎ ಮಾಡಿಕೊಳ್ಳಲು ವಿಳಂಬವಾಗಿರುವುದರಿಂದ ಕಂಪನಿಯವರ ಕೋರಿಕೆ ಮೇರೆಗೆ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಮುಂದಿನ 36 ತಿಂಗಳುಗಳ ಅವಧಿಗೆ ವಿಸ್ತರಿಸಲು ಹಾಗೂ ಮುಂದೇ ಕಾಲಾವಧಿ ವಿಸ್ತರಣೆಗೆ ಅವಕಾಶವಿಲ್ಲವೆಂಬ ಷರತ್ತನ್ನೊಳಗೊಂಡು ಸರ್ಕಾರಕ್ಕೆ ಶಿಫಾರಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 149 ಎನ್‌ಸಿಇ 2007, ಬೆಂಗಳೂರು, ದಿನಾಂಕ:26ನೇ ಮೇ, 2007**

ಸರ್ಕಾರವು ಮೆ:: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಕುದರಬ್ಬಿ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕುದರಬ್ಬಿ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಮುಂದೆ ಕಾಲಾವಧಿ ವಿಸ್ತರಣೆಗೆ ಅವಕಾಶವಿರುವುದಿಲ್ಲವೆಂಬ ಷರತ್ತಿಗೊಳಪಟ್ಟು ಕಾಲಾವಕಾಶವನ್ನು ಮುಂದಿನ 36 ತಿಂಗಳುಗಳ ಅವಧಿಗೆ ವಿಸ್ತರಿಸಲಾಗಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** ಮೆ: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಹರಸನಗಿರಿ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 105 ಎನ್‌ಸಿಇ 2004 ದಿನಾಂಕ: 13.5.2004.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಹರಸನಗಿರಿ/2007/905 ದಿನಾಂಕ: 21.4.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮೆ:: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಹರಸನಗಿರಿ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಹರಸನಗಿರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೆ ಒಳಪಡಿಸಿ ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ಪಿ.ಪಿ.ಎ ಮಾಡಿಕೊಳ್ಳಲು ವಿಳಂಬವಾಗಿರುವುದರಿಂದ ಕಂಪನಿಯವರ ಕೋರಿಕೆ ಮೇರೆಗೆ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಮುಂದಿನ 36 ತಿಂಗಳುಗಳ ಅವಧಿಗೆ ವಿಸ್ತರಿಸಲು ಹಾಗೂ ಮುಂದೇ ಕಾಲಾವಧಿ ವಿಸ್ತರಣೆಗೆ ಅವಕಾಶವಿಲ್ಲವೆಂಬ ಷರತ್ತನ್ನೊಳಗೊಂಡು ಸರ್ಕಾರಕ್ಕೆ ಶಿಫಾರಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 150 ಎನ್‌ಸಿಇ 2007, ಬೆಂಗಳೂರು, ದಿನಾಂಕ:26ನೇ ಮೇ, 2007**

ಸರ್ಕಾರವು ಮೆ: ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಹರಸನಗಿರಿ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಹರಸನಗಿರಿ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಮುಂದೆ ಕಾಲಾವಧಿ ವಿಸ್ತರಣೆಗೆ ಅವಕಾಶವಿರುವುದಿಲ್ಲವೆಂಬ ಷರತ್ತಿಗೊಳಪಟ್ಟು ಕಾಲಾವಕಾಶವನ್ನು ಮುಂದಿನ 36 ತಿಂಗಳುಗಳ ಅವಧಿಗೆ ವಿಸ್ತರಿಸಲಾಗಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.991

## ENERGY SECRETARIAT

**Sub:** Transfer of 0.8 MW Wind Power Capacity in favour of M/s R.B. Seth Shreeram Narsingdas-reg.

**Read:** 1) Government Order No: DE 26 NCE 1999 dated: 13.05.1999.

2) Government order No: EN 77 NCE 2005 dated: 18.3.2005.

3) Government order No: EN 472 NCE 2006 dated: 22.12.2006.

4) Letter No. KRED/08/RBS-VWIL/2007/1379 dated: 14.6.2007 received from the Managing Director, Karnataka Renewable Energy Development Limited, Bangalore.

**PREAMBLE**:

In the Government Order dated 18.3.2005 read at (2) above, sanction has been accorded for implementation of 99.2 M.W. capacity Wind Power Project at Tumkur District to M/s Logaer Machines (India) Ltd ( Now M/s Vish Wind Infrastructure Limited).

In the Government Order dated: 22.12.2006 read at (3) above, permission has been accorded for transfer of 0.8 MW capacity Wind Power Project at Hanumanthanahalli Village, Chickanayakanahalli Taluk, Tumkur District to M/s MCN Developers.

Now, the Managing Director, Karnataka Renewable Energy Development Limited, Bangalore in his letter dated: 14.6.2007 read at (4) above, has recommended for cancellation of 0.8 MW capacity in favour of M/s MCN Developers due to administrative reasons. He has further recommended to transfer of 0.8 MW Wind Power capacity at Hanumanthanahalli Village, Chickanayakanahalli Taluk, Tumkur District in favour of M/s R.B. Seth Shreeram Narsingdas.

The proposal has been examined at the Government level and hence the order:

**Government Order No: EN 235 NCE 2007, Bangalore, Dated:21th June, 2007**

Government accords approval for cancellation of 0.8 M.W. of transfered capacity in favour of M/s MCN Developers accorded in Government Order No: EN 472 NCE 2006 dated: 22.12.2006.

Further permission is accorded for transfer of 0.8 MW Wind Power capacity at Hanumanthanahalli Village, Chickanayakanahalli Taluk, Tumkur District in favour of M/s R.B. Seth Shreeram Narsingdas and all the approvals, documents and assignments shall stand transfered in the name of M/s R.B. Seth Shreeram Narsingdas.

The terms and conditions of the Government Order read at (1) above shall **IPSO FACTO** applicable.

By Order and in the Name of Governor of Karnataka,

PR-1158

**SURESH.B.KRISHNAPPANAVAR**
Under Secretary to Government,
Energy Department.

**ಇಂಧನ ಸಚಿವಾಲಯ**

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಬಗ್ಗೆ-ಆದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ಫೋರ್-ಎಫ್/2006/2403 ದಿನಾಂಕ: 28.10.2006.

2) ದಿನಾಂಕ: 29.12.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: Four EF Wind Power Private Limited ಕಂಪನಿಗೆ ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ 62.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ: 29.12.2006 ರಂದು ನಡೆದ ಹಂಚಿಕೆ ಸಮಿತಿ ಮುಂದೆ ಇಡಲಾಗಿದ್ದು ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ:1 ರಲ್ಲಿ ಸಮಿತಿಯು ಅನುಮೋದಿಸಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 456 ಎನ್‌ಸಿಇ 2006, ಬೆಂಗಳೂರು, ದಿನಾಂಕ:22ನೇ ಮೇ, 2007**

ಮೆ: Four EF Wind Power Private Limited ಕಂಪನಿಗೆ ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ 62.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :-

| Sl. No. | Proposed capacity in MW | Near by villages of the proposed area and district. | Geographical area description of the project |
|---|---|---|---|
| 1 | 4 MW<br>(8x500 kW) | Malikodlu, Aranimule, Gaudargadde, Halebadi, **North Canara Disrtict.** | The potential area is a mixture of non-contigous hillocks situated in Minor State Forest located on the East of Marukeri and Malikodlu villages. Further, as per SOI map, the area is described as dense mix jungle covered with cane. The project can be developed subjecting to clearances of CRZ (Coastal Regulatory Zone). The proposed area is held in the following Geographical co-ordinates:<br>**Latitude**: 14°3'7"- 14°4'51" N<br>**Longitude**: 74°30'37"- 74°32'21" E<br>**Ridge peaks:** 178, 184m Amsl. |
| 2. | 52.5 MW<br><br>(80x500 kW)<br>& (50x250 kW) | Madlabare Gudda, Male Gudda, Karni, **Shimoga and South Canara District.**<br><br>Baindur, Karnigadde, **South Canara District.**<br><br>Bhatkal, Marukeri, Muttalli, **North Canara district.** | Three areas are identified for development of 52.5 MW Wind Power Project in the coastal area. These areas are identified as Area-'A', Area-'B' and Area-'C'. The details of these areas given here under:<br>**<u>Area-'A' (40 MW):</u>**<br>It is a mixture of complex terrain and large plateau's and is mostly oriented in NW-SE direction. The area is situated in the Kadlu Reserved Forest and has open scrub & dense scrub features. It consists of several elevated peaks and is held in the following Geographical features:<br>**Latitude**: 13°51'24"- 14°0'0" N<br>**Longitude**: 74°39'20"- 74°45'0" E<br>**Ridge peaks:** 779, 743, 770, 657, 825, 576, 797, 640, 843, 739, 519, 647, 633, 678, 867, 918, 1102, 1028, 751, 686, 666, 821, 894, 643m Amsl.<br>**<u>Area –'B' (10 MW)</u>**:-<br>It is a large plateau spread across NH-17 and mostly oriented in East-West direction and situated in Baindur Reserved Forest and it has open scrub features with higher plains has 3 peaks and covered in the following Geographical co-ordinates:<br>**Latitude**: 13°52'13"- 13°55'0" N<br>**Longitude**: 74°36'10"- 74°40'48" E<br>**Ridge peaks:** 124, 82, 114m Amsl<br>**<u>Area –'C' (2.5 MW)</u>**:-<br>It is a stony waste with open scrub featured area situated on the East & North-East of Bhatkal Town. The development of project, is subjecting to clearances of NH-17 and CRZ including MOEF. The proposed area is covered in the following Geographical co-ordinates:<br>**Latitude**: 13°58'34"- 14°0'0" N<br>**Longitude**: 74°33'58"- 74°35'28" E<br>**Ridge peaks:** 157, 146m Amsl |

| Sl. No. | Proposed capacity in MW | Near by villages of the proposed area and district. | Geographical area description of the project |
|---|---|---|---|
| 3. | 6 MW<br>(24x250 kW) | Talmakki, Mugli, Hakkalmane, Bedarkere, Mavinasag Betta, **North Canara disrtict** | The proposed area is divided into two sub-areas and are identified as Area- 'A' and Area-'B'.<br><br>**Area –A ( 3 MW):**<br>It consists of non-contigous large plateaus and is situated East of NH-17 and are spread around Nellikere & Hakkalmane villages. It has open scrub and dense scrub features. The proposed area consists of 4 peaks and is held in the following Geographical co-ordinates:<br>**Latitude**: 14°11'27"- 14°13'49" N<br>**Longitude**: 74°26'35"- 74°30'0" E<br>**Ridge peaks:** 126, 149, 25.5, 26.6m Amsl<br><br>**Area-B (1 MW):**<br>It is a non-contigous hill featured area situated in Minor Forest with two peaks and also called as Mavinasag Betta. The area is located on the North of Bedarkere and is covered in the following Geographical co-ordinates:.<br>**Latitude**: 14°8'26"- 14°9'14" N<br>**Longitude**: 74°28'52"- 74°30'0" E<br>**Ridge peaks:** 186, 202m Amsl.<br>The above mentioned areas are developed subject to clearances of NH-17 and CRZ (Coastal Regulatory Zone). |
| **Total** | | **62.5 MW** | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ. 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

